ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ

ಸಂಪಾದಕರು:— ಶ್ರೀ ಕಲಮುದಾನಿ ಗುರುರಾಯರು

ಬರಲಿರುವ ಗ್ರಂಥಗಳು:

೧ ಜೀವನ-ಪಥ ( ಕಾದಂಬರಿ )

( ಲೇಖಕರು:- ಶ್ರೀ ಮಹಿಷಿ ಮಧ್ವರಾಯರು )

೨ ಮುಗಿಲ ಮಲ್ಲಿಗೆ ( ಕಥಾಸಂಗ್ರಹ )

( ಲೇಖಕರು:— ದಿವಂಗತ ವಿಜಯ ಬೆಟಗೇರಿ. )

ಪ್ರಕಾಶಕರು:-

ಬಿ. ಜಿ. ಸಂಕೇಶ್ವರ

ಗದಗ.

ಮುದ್ರಕರು:- ಬಿ. ಪಿ. ಜಕ್ಕನಗೌಡರ.

ಮುದ್ರಣಾಲಯ

ವಾಗ್ವಿಲಾಸ ಪಾವರ ಪ್ರಿಂ. ಪ್ರೆಸ್

ಹುಬ್ಬಳ್ಳಿ.

ಸಂಜೀವಿನಿ ಪ್ರಕಾಶನ: ೧

# ನಸುಕು

( ಗೀತಗಳು )

ಶ್ರೀ ನರೇಗಲ್ಲ ಪ್ರಹ್ಲಾದರಾಯರು

ಸಂಜೀವಿನಿ ಪ್ರಕಾಶನ
ಹುಬ್ಬಳ್ಳಿ



೧೯೪೩ ] [ ೧-೦-೦

ನನ್ನ ಬಾಳುವೆಗೆ ಬೆಳಕನಿತ್ತ
'ಗೆಳೆಯರ ಗುಂಪಿ'ನ ಕಣಸಿಗರಾದ

**ಶ್ರೀ ಗುರು**
**ಅಂಬಿಕಾತನಯದತ್ತರ**

ಚರಣಸಂಸಿಧಿಯಲ್ಲಿ
ಗುರುದಕ್ಷಿಣೆ

— ಪಲ್ಲಿ

## ಹರಕೆ

ಭೋಗಕ್ಕೆ ಮನಸೋತು ವಿಕಟವಿಟಗಣದಂತೆ
ಆಗಿರುವದೀಗ ನಾಡು —
ರೋಗಕ್ಕೆ ಮೈಸೋತು ಕೈಸಾಗದಾಗಿಹುದು
ಯೋಗಸ್ಥನಾಗಿ ಹಾಡು !

ಯೋಗಸ್ಥನಾಗಿ ಗಡ ಹಾಡುಗಳ ಹಾಡುತ್ತ
ಕನ್ನಡಿಗರೊಡನೆ ಆಡು !
ಯೋಗ-ಭೋಗದ ಭೂಮಿಯಾಗಿ ಸಾಗುವ ಹಾಗೆ
ಕನ್ನಡದ ನಾಡ ಮಾಡು !

— ಅಂಬಿಕಾತನಯದತ್ತ

# ಪರಿವಿಡಿ


| ಸಂಖ್ಯೆ | ಹೆಸರು | ಪುಟ |
|---|---|---|
| ೧ | ನಸುಕು | ೧ |
| ೨ | ಸರಸ್ವತಿಗೆ | ೪ |
| ೩ | ಜೇನು-ಬೆಲ್ಲ | ೬ |
| ೪ | ಹೊಸ ಬಟ್ಟೆ | ೭ |
| ೫ | ಸ್ವರಾಜ್ಯ ಸ್ಥಾಪನೆ | ೮ |
| ೬ | ಭಾರತದ ಭಾಗ್ಯತಿಲಕ | ೯ |
| ೭ | ಶ್ರೀ ಬಸವೇಶ್ವರರಿಗೆ | ೧೦ |
| ೮ | ವಿಜಯವಿದ್ಯಾರಣ್ಯರಿಗೆ | ೧೨ |
| ೯ | ನೀಲಗಿರಿ | ೧೩ |
| ೧೦ | ಭಾರತಾರ್ಪಣ | ೧೪ |
| ೧೧ | ಜಯ ಹಿಂದ ! | ೧೬ |
| ೧೨ | ಮೊದಲ ಗೆಳೆಯ | ೧೭ |
| ೧೩ | ಶ್ರೀ ಕೃಷ್ಣನಿಗೆ | ೧೮ |
| ೧೪ | ಗೆಳೆತನದ ಎಣಿಕೆ | ೧೯ |
| ೧೫ | ಮುನಿದವನಿಗೆ | ೨೧ |
| ೧೬ | ಕೊಳಲಿನ ಗೆಳೆಯನಿಗೆ | ೨೨ |
| ೧೭ | ಶ್ರೀ ಕೃಷ್ಣನ ಕಾಣಿಕೆ | ೨೩ |
| ೧೮ | ಅಗಲಿದ ಗೆಳೆಯನಿಗೆ | ೨೬ |
| ೧೯ | ಮುದ್ದು 'ವಿಮಲೆ'ಗೆ | ೨೭ |
| ೨೦ | ಜೋಗುಳ | ೨೯ |
| ೨೧ | ಆ ಪಕ್ಷಿ ಈ ಪಕ್ಷಿ | ೩೦ |
| ೨೨ | ಪ್ರೇಮಕೀರ್ತಿ | ೩೧ |
| ೨೩ | ಏಕೆ ? | ೩೨ |
| ೨೪ | ಏಕೆ ಹೆದರಿಕೆ ? | ೩೩ |
| ೨೫ | ಬಿಡುವರೇ ಕೈಯ ? | ೩೪ |
| ೨೬ | ಅಭಯ-ಯೋಗ | ೩೫ |
| ೨೭ | ಪ್ರೇಮದತ್ತಾತ್ರೇಯ(೧) | ೩೬ |
| ೨೮ | ,, (೨) | ೩೭ |
| ೨೯ | ಗೆಳೆಯ ವಿನಾಯಕನಿಗೆ | ೩೮ |
| ೩೦ | ಗೆಳೆಯ ಲಕ್ಷ್ಮಣನಿಗೆ | ೩೯ |
| ೩೧ | ಗೆಳೆಯರೆಲ್ಲರಿಗೆ | ೪೦ |
| ೩೨ | ಬಿಡುಗಡೆ | ೪೨ |
| ೩೩ | ಬಿಡುಗಡೆಯ ಬಳಿಕ | ೪೩ |
| ೩೪ | ಪ್ರೀತಿಗೆ | ೪೫ |
| ೩೫ | ಉತ್ಸುಕತೆ | ೪೬ |
| ೩೬ | ದಾರಿದೀವಿಗೆ | ೪೭ |
| ೩೭ | ಮದುಮಗ ರಾಮುವಿಗೆ | ೪೮ |
| ೩೮ | ನನಸೇ ! | ೪೯ |
| ೩೯ | ಓಂಕಾರಕ್ಕೆ ನಮಸ್ಕಾರ | ೫೦ |
| ೪೦ | ಒಂದು | ೫೧ |
| ೪೧ | ಗೀತಾಪತಿಗೆ | ೫೨ |
| ೪೨ | ಸ್ಪಂದನ | ೫೩ |
| ೪೩ | ಅಂತರಂಗವನರಳಿಸು | ೫೫ |
| ೪೪ | ನವ ನವ ರೂಪದಿ ಬಾ | ೫೬ |
| ೪೫ | ಹಾಡೈ ಆತನ ಹೆಸರು | ೫೭ |
| ೪೬ | ಎಲ ಎಲಾ ನಿಷ್ಠುರಾ | ೫೮ |
| ೪೭ | ಇಕೊ ಕೊಯ್ದುಕೊ | ೫೯ |
| ೪೮ | ಒಂಟಿಗನ ಹಾಡು | ೬೧ |
| ೪೯ | ಅಹ ಅಸೀಮನೆ ! | ೬೨ |
| ೫೦ | ನೀನೆಲ್ಲಿ ? | ೬೩ |
| ೫೧ | ಒಂದೆ ನಮಸ್ಕಾರ ! | ೬೪ |

# ಸಂಪಾದಕನ ಮಾತು.

ಕನ್ನಡದಲ್ಲಿಯ ಒಳ್ಳೊಳ್ಳೆಯ ಗ್ರಂಥಗಳನ್ನು ಪ್ರಕಟಿಸಬೇಕು, ರಸಿಕ ಓದುಗರನ್ನು ತಣಿಸಬೇಕು, ಈ ಮೂಲಕ ಕನ್ನಡ ತಾಯಿಗೆ ಸೇವೆ ಸಲ್ಲಿಸ ಬೇಕು ಎಂಬ ನನ್ನ ಬಹು ದಿನದ ಬಯಕೆಯ ಫಲವೇ ಈ "ಸಂಜೀವಿನಿ ಪ್ರಕಾಶನ". ಸಾಹಿತಿಗಳ ಹೃದಯದಲ್ಲಿಯ ಕಲಾಕೃತಿಯ ಕಿಡಿಯು ಅವರ ಕೃತಿಗಳಿಂದಲೇ ಅವರನ್ನು ಚಿರಂಜೀವಿಯನ್ನಾಗಿ ಇಡುವ ಸಂಜೀವಿನಿಯಾದು ದರಿಂದ ಅಂಥ ಗ್ರಂಥಗಳ ಪ್ರಕಾಶನಕ್ಕೆ "ಸಂಜೀವಿನಿ ಪ್ರಕಾಶನ" ಎಂದು ಕರೆದಿದ್ದೇನೆ.

ಕನ್ನಡ ನಾಡಿನಲ್ಲಿ ಈಗ ಅನೇಕ ಪ್ರಕಾಶಕರಿದ್ದಾರೆ. ಪ್ರಕಾಶನ ಸಮಿತಿ, ಸಂಸ್ಥೆಗಳಿವೆ. ಅವರೆಲ್ಲರೂ ಒಂದೊಂದು ಬಗೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ನಾನೂ ಈ ಕೆಲಸದಲ್ಲಿ ತೊಡಗಿದ್ದೇನೆ. ಆದರೆ ಈವರೆಗೆ ಇವರು ಕೊಟ್ಟ ಮತ್ತು ಕೊಡುತ್ತಿರುವ ಸಾಹಿತ್ಯ ಪ್ರಕಟನೆಗಳಿಗಿಂತ ಹೆಚ್ಚಿನ ದನ್ನು ನಾನು ಕೊಡಲು ಹೊರಟಿದ್ದೇನೆ ಎಂದು ನಾನು ಹೇಳಲಾರೆ. ಆದರೆ ಈ "ಸಂಜೀವಿನಿ ಪ್ರಕಾಶನ" ದಲ್ಲಿ ಕೇವಲ ಲಲಿತ ಸಾಹಿತ್ಯ ಕೃತಿಗಳಿಗಷ್ಟೇ ಸ್ಥಾನವಿರದೆ ಸಾಹಿತ್ಯದ ವಿವಿಧ ಅಂಗಗಳ ಕೃತಿಗಳನ್ನೂ ಸೇರಿಸಲು ಪ್ರಯತ್ನಿ ಸುತ್ತೇನೆ. ಆದುದರಿಂದ ಈ ಕಾರ್ಯದಲ್ಲಿ ನನ್ನ ಎಲ್ಲ ಆಪ್ತೇಷ್ಟರೂ, ಗೆಳೆ ಯರೂ ಸಹೃದಯರೂ ನನಗೆ ಸಹಾಯ ಮಾಡುವರೆಂದು ನಂಬುವೆನು.

ಈ ಪ್ರಕಾಶನದಲ್ಲಿ ಗೆಳೆಯ ನರೇಗಲ್ಲ ಪ್ರಲ್ಹಾದರಾಯರ ಜೀವನ ಗೀತಗಳ ಸಂಕಲನವನ್ನು ಮೊದಲನೆಯದಾಗಿ ಓದುಗರಿಗೆ ಕೊಡಲು ನಾನು ಬಹು ಹೆಮ್ಮೆ ಪಡುತ್ತೇನೆ. ಸಂಪಾದಕನಾದ ನಾನೇ ಮುನ್ನುಡಿ ರೂಪದಲ್ಲಿ ಕೆಲ ಮಾತುಗಳನ್ನು ಹೇಳಬೇಕೆಂದು ಅವರು ಪ್ರೀತಿಯಿಂದ ಹೇಳಿದ ಮಾತಿಗೆ ಒಲ್ಲೆನೆನ್ನಲಾರದಾದೆ. ಅವರ ಗೀತಗಳ ಈ ಸಂಕಲನದ ಬಗ್ಗೆ ನಾಲ್ಕು ಮಾತುಗಳನ್ನು ಹೇಳುವದು ನನ್ನ ಇಡೀ ಜೀವನದಲ್ಲಿಯೇ ಒಂದು ಮಹಾ ಭಾಗ್ಯದ ವಿಷಯವೆಂದು ನನಗನಿಸುವದು.

೧೯೩೯ರಲ್ಲಿ ನಾನು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸೇರಿ ದಾಗ ಶ್ರೀ. ಬೇಂದ್ರೆಯವರ ಸುತ್ತಲೂ ಕೂಡಿದ "ಗೆಳೆಯರ ಗುಂಪಿ"ನಲ್ಲಿ ನಾನು ಕಾಲಿಟ್ಟೆನು. ಅಂದೇ ಶ್ರೀ. ನರೇಗಲ್ಲರ ಪರಿಚಯ ನನಗಾಯಿತು.

ಆಗ ಇವರು ತಮ್ಮ ರಾಷ್ಟ್ರೀಯ ವಿದ್ಯಾಲಯದ ಶಿಕ್ಷಣಕ್ರಮ ಮುಗಿಸಿ, ಬಂಗಾಲಕ್ಕೆ ತೆರಳಿ ಗುರುದೇವ ರವೀಂದ್ರನಾಥ ಠಾಕೂರರ ಶಾಂತಿ ನಿಕೇತನದಲ್ಲಿ ಎರಡು ಮೂರು ವರುಷವಿದ್ದು, "ವಿಶ್ವಭಾರತಿ"ಯ ಪದವೀಧರರಾಗಿ ಕನ್ನಡ ನಾಡಿಗೆ ಆದೇ ಬಂದಿದ್ದರು. "ಜಯಕರ್ನಾಟಕ" ಮಾಸ ಪತ್ರಿಕೆಯ ಸಂಪಾದಕ ವರ್ಗದಲ್ಲಿ ಪ್ರಮುಖರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಹೊಸ ಜಗತ್ತನ್ನು ಕಂಡು ಬಂದ ಇವರ ಗೆಳೆತನವು ನನಗೆ ಲಭಿಸಿದ್ದಕ್ಕಾಗಿ ನಾನು ಬಹಳ ಉಬ್ಬಿದೆ. ಇವರೂ, ಇವರ ಗೆಳೆಯರೂ ನನ್ನ ಸಾಹಿತ್ಯಜೀವನದ ಆ ಅವಧಿಯಲ್ಲಿ ಬಹಳ ಪರಿಣಾಮವನ್ನುಂಟುಮಾಡಿದರು. ಅಂದಿನಿಂದ ಇಂದಿನವರೆಗೂ ಶ್ರೀ|| ನರೇಗಲ್ಲರು ನನ್ನ ಗೆಳೆಯರಾಗಿದ್ದಾರೆ.

ಗೆಳೆಯ ಪ್ರಹ್ಲಾದರಾಯರು ಕಳೆದ ೨೦ ವರುಷಗಳಿಂದಲೂ ಕನ್ನಡದ ಸಂಘಟಕರಲ್ಲೊಬ್ಬರಾಗಿ ವಿವಿಧ ಶಾಖೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರು ಒಳ್ಳೇ ಕವಿಗಳೆಂಬುದು ಈ ಸಂಕಲನವನ್ನೋದಿದವರಿಗೆ ಅನಿಸದಿರದು. ಇವರು ನುರಿತ ವಾಗ್ಮಿಗಳು; ಸಮಾಲೋಚಕಗಾರರು; ಗಮಕಿಗಳು; ಮತ್ತು ಪ್ರಬಂಧಕಾರರು. ಇವರ "ಪ್ರಬಂಧ ಪುಷ್ಪಾಂಜಲಿ"ಯು ಹೋದವರುಷ "ಮಿಂಚಿನ ಬಳ್ಳಿ" ಎಂಬ ಗ್ರಂಥಮಾಲೆಯಲ್ಲಿ ಪ್ರಕಟವಾಗಿದೆ. ಆ ಗ್ರಂಥದ ಮುನ್ನುಡಿಯಲ್ಲಿ ಗೆ|| ಮುಗುಳಿ ರಂಗರಾಯರು ಇವರನ್ನುದ್ದೇಶಿಸಿ ೧೯೨೧ರಲ್ಲಿ ಕನ್ನಡ ನಾಡಿನಲ್ಲಿ ಉದಯಗೊಂಡ ಪುನರುಜ್ಜೀವನದ ನಸುಕನ್ನು ಕಂಡು

'ಅಕ್ಕ ನಸುಕೇ ಅಕ್ಕರದಿ ನಕ್ಕು ನನ್ನ ಈ ಅಂತರಂಗವನು ನಗಿಸು'

ಎಂದು ಹಾಡಿ ನಲಿದವರಲ್ಲಿ ಗೆ|| ಪ್ರಹ್ಲಾದರಾಯರೊಬ್ಬರು— ಎಂದೆಂದುದು ತೀರ ನಿಜವಿದೆ. ಈ ಸಂಕಲನದ ಮೊದಲನೆಯ ಪದ್ಯವಾದ "ನಸುಕ"ನ್ನು ಕವಿಶ್ರೇಷ್ಠ ಶ್ರೀ|| ಬೇಂದ್ರೆಯವರೇ ಮನಬಿಚ್ಚಿ ಹೊಗಳಿ ಹರಸಿದ್ದಾರೆಂದ ಬಳಿಕ ಕವಿತಾಪ್ರಪಂಚದಲ್ಲಿ ಅಷ್ಟೊಂದು ಅಭಿಜ್ಞನಲ್ಲದ ನಾನು ಹೆಚ್ಚು ಹೇಳಲಾರೆ.

ಇಲ್ಲಿಯ ೫೧ ಪದ್ಯಗಳಲ್ಲಿ "ಜಯ ಹಿಂದ" ಮತ್ತು "ಅಂತರಂಗವನು ಅರಳಿಸು" ಇತ್ಯಾದಿ ಕೊನೆಯ ೯ ವಂಗ ಗೀತಗಳ ಅನುವಾದಗಳನ್ನು ಬಿಟ್ಟರೆ ಉಳಿದವುಗಳೆಲ್ಲ ಕವಿಯು ತಮ್ಮ ೧೪ರಿಂದ ೩೬ನೆಯ ವಯಸ್ಸಿನ ಒಳಗೆ ಬರೆದವುಗಳು. ಈ ಕಾಲಕ್ಕೆ ಕವಿಯ ಬಾಳುವೆಯಲ್ಲಿ ಅತ್ಯಂತ ಪ್ರಭಾವವನ್ನು ಬೀರಿದ ವ್ಯಕ್ತಿ ಹಾಗು ಪ್ರಸಂಗಗಳನ್ನು ಕುರಿತ ರಸನಿಮಿಷಗಳೇ ಈ ಕವಿತೆಗಳು. ಆದುದರಿಂದ ಈ ರಸನಿಮಿಷಗಳ ಪ್ರಸಂಗಗಳು ಕವಿತೆಗಳನ್ನು

ಓದುವವರಿಗೆ ತಿಳಿದರೆ ಓದುಗರು ಹೆಚ್ಚು ಆನಂದದಲ್ಲಿ ಲೀನರಾಗಬಹುದೆಂದು ಪ್ರತಿಯೊಂದು ಕವಿತೆಗೆ ಪರಿಚಯವನ್ನು ಬರೆಯಲು ನಾನು ಸೂಚಿಸಿದೆ. ಅದರಂತೆಯೆ ಅವರು ಬರೆದಿದ್ದಾರೆ. ಕೊನೆಯ ೯ ಗೀತಗಳನ್ನು ಗುರುದೇವರ ಮೂಲ ವಂಗ ಗೀತಗಳೊಂದಿಗೆ ಗೆ॥ ನರೇಗಲ್ಲರ ಬಾಯಿಂದಲೇ ಕೇಳಬೇಕು. ಅಷ್ಟು ರಸವತ್ತಾಗಿವೆ. ಅಷ್ಟು ತೇಜೋಮಯವಾಗಿವೆ. ಸಾರ್ವಜನಿಕ ಸಭೆಗಳಲ್ಲಿ ವಂಗ ಗೀತಗಳನ್ನೂ ಅವುಗಳ ಕನ್ನಡ ಅನುವಾದಗಳನ್ನೂ ಇವರು ಹಾಡಿತೋರಿಸಿದಾಗ ಶ್ರೋತೃಗಳು ತಲ್ಲೀನರಾಗಿ ಪುಲಕಿತರಾದುದುಂಟು.

ಗೆ॥ ಪ್ರಲ್ಹಾದರಾಯರ ಗೆಳೆತನದಲ್ಲಿ ನಾನು ಕಂಡ ವಿಶೇಷವೆಂದರೆ ಆದರ್ಶ ಪ್ರೀತಿಗಾಗಿ ಅವರ ಹಂಬಲ. ದೇಶಪ್ರೀತಿ, ಇಷ್ಟಮಿತ್ರ ಪ್ರೀತಿ, ಕೊನೆಯದಾಗಿ ಸೃಷ್ಟಿಕರ್ತನಲ್ಲಿ ಇರಿಸಬಹುದಾದ ಸಂಪೂರ್ಣ ತನ್ಮಯ ಪ್ರೀತಿ ಇವುಗಳಿಗೆ ಜೀವನವು ಪ್ರಯೋಗಶಾಲೆಯಾಗಬೇಕೆಂದು ನನಗೆ ಅನೇಕ ಸಲ ಅವರು ಹೇಳಿದುದುಂಟು. ಈ ಗೀತಸಂಕಲನದಲ್ಲಿಯೂ ಈ ಮಾತು ಒಡೆದು ಕಾಣುವದು. ಮೊದಲನೆಯ ೧೧ ಗೀತಗಳು ದೇಶಪ್ರೀತಿಯನ್ನು, ೧೨ರಿಂದ ೨೮ರ ವರೆಗಿನ ಗೀತಗಳು ಮಿತ್ರಪ್ರೀತಿಯ ವಿವಿಧತೆಯನ್ನು, (೨೯, ೩೦, ೩೧ರಲ್ಲಿ ಸಖ್ಯವು ವಾತ್ಸಲ್ಯದೊಂದಿಗೆ ಮಿಲನವಾಗಿದೆ) ವ್ಯಕ್ತಪಡಿಸಿವೆ. ೩೨, ೩೩ನೆಯ ಪದ್ಯಗಳು ಜೀವನದಲ್ಲಿಯ ವಿಷ ನಿಮಿಷಗಳನ್ನು ಬಣ್ಣಿಸಿವೆ; ಇಲ್ಲಿ ಪ್ರೀತಿಯು ನಿರಾಶಾಮಯವಾಗಿದ್ದರೂ ಕವಿಯು ಸ್ವಭಾವತಃ ಆಶಾವಾದಿಯಾದುದರಿಂದ ಮತ್ತೆ ತೂಕ ಹಿಡಿದು,

"ಪುರುಷಾರ್ಥ ಸಿದ್ಧಿ ಸಲೆ ಪುರುಷೋತ್ತಮಾ"

ಎಂದು ಮುಂದೆ ಸಾಗುತ್ತಾನೆ. ೩೪ರಿಂದ ೩೭ರ ವರೆಗಿನ ಗೀತಗಳಲ್ಲಿ ವೈವಾಹಿಕ ಪ್ರೀತಿಯನ್ನೂ ಮುಂದಿನ ಎಲ್ಲ ಪದ್ಯಗಳಲ್ಲಿ ಇಷ್ಟ ದೇವತೆಯಲ್ಲಿರಬೇಕಾದ ಆದರ್ಶ ಪ್ರೀತಿಯ ನಿಲುವನ್ನೂ ಕವಿ ಚಿತ್ರಿಸಿದ್ದಾರೆ

ಮಿತ್ರಪ್ರೀತಿಗೆ ನನ್ನ ಈ ಕವಿಮಿತ್ರರ ಜೀವನದಲ್ಲಿ ಶ್ರೇಷ್ಠ ಸ್ಥಾನವುಂಟು. ಮಿತ್ರಪ್ರೀತಿಯೂ, ದೇವಪ್ರೀತಿಯೂ ಸರಿಬೆರಕೆಯಾಗಿವೆ. ಗೆಳೆಯರು ತಮ್ಮ ಬಾಳುವೆಯಲ್ಲಿ ದೈವಸ್ವರೂಪರಾಗಿ ಕಂಡುದುಂಟೆಂದು ಅವರೇ ಒಂದು ಕವಿತೆಯ ಪರಿಚಯದಲ್ಲಿ ಹೇಳುತ್ತಾರೆ. ಶ್ರೀ ರವೀಂದ್ರರು

"ನನ್ನ ಒಳವಲಿ ನಿನ್ನ ಬೆಳಕದು ಬಂತು ಇಸಿತೋ ಸುಮಧುರಾ"

ಎಂದಂದಂತೆ ದೇವಾಂಶವು ಮಾನವ ಹೃದಯದೊಳಗಿಂದಲೇ ವ್ಯಕ್ತವಾಗುವದೆಂದು ಅವರು ನನಗೆ ಅನೇಕಸಲ ಹೇಳಿದ್ದಾರೆ. ತಮ್ಮ ಜೀವದ ಗೆಳೆಯನನ್ನು

"ಬಿಚ್ಚಿಟ್ಟಿಹ ಜಗದ ಅಂತರಂಗದ ರಂಗ"

ಎಂದು ಅವರು ಕರೆದುದು ಅರ್ಥಪೂರ್ಣವಿದೆ.

ಕೊನೆಗೆ ಬರುವ ರವೀಂದ್ರರ ವಂಗ ಗೀತಗಳ ಅನುವಾದಗಳು ಬಹು ಯಶಸ್ವಿಯಾಗಿರುವವೆಂದು ನನಗನಿಸುವದು. ಕನ್ನಡ-ಬಂಗಾಲಿ ಭಾಷಾ ವಿಶಾರದರೇ ಇದನ್ನು ಹೆಚ್ಚಾಗಿ ವಿಮರ್ಶಿಸಬೇಕು. ರವೀಂದ್ರರ ಕೆಲವು ಗೀತಗಳು ಈಗಾಗಲೇ ಕನ್ನಡದಲ್ಲಿ ಅನುವಾದಿತವಾಗಿವೆ. ಆದರೆ ಅವು ವಂಗ ಭಾಷೆಯಿಂದ ಕನ್ನಡಕ್ಕಿಳಿಯದೆ ಇಂಗ್ಲೀಷ ಅನುವಾದದಿಂದ ಕನ್ನಡಕ್ಕಿಳಿದಿವೆ. ಅಂತೆಯೇ ಅವುಗಳಲ್ಲಿ ಅಷ್ಟು ಸೊಗಸನ್ನೂ ಮಾಧುರ್ಯವನ್ನೂ ಕಾಣೆವು. ಆದರೆ ಇಲ್ಲಿ ನನ್ನ ಗೆಳೆಯರು ಮೂಲ ಬಂಗಾಲಿಯಿಂದಲೇ ಗೀತಗಳನ್ನು ಕನ್ನಡಕ್ಕಿಳಿಸಿದ್ದಾರೆ. ವಂಗ ಮತ್ತು ಕನ್ನಡದ ಛಂದಗಳ ಇಲ್ಲಿಯ ಕವನಗಳಲ್ಲಿ ಕಲಮುಗೊಂಡಿವೆಯೆಂದು ಅವರೇ ವಂಗ ಗೀತಗಳ ಅನುವಾದಗಳ ಪರಿಚಯದಲ್ಲಿ ಅಂದಿದ್ದಾರೆ.

ಇಲ್ಲಿಯ ವರೆಗೆ ನನ್ನ ಕವಿಮಿತ್ರರ ಬಗ್ಗೆ ಮತ್ತು ಅವರ ಗೀತಗಳ ಬಗ್ಗೆ ನನ್ನ ಹೇಳಿಕೆಯು ಬಹಳ ವಿಸ್ತಾರವಾಯಿತೇ, ಹೊಗಳಿಕೆಯೇ, ವಿವರಣೆಯೇ ಅಥವಾ ಅವರಲ್ಲಿರುವ ನನ್ನ ಗೆಳೆತನದ ಮೋಹವೇ,ಅದೇನೆ ಇರಲಿ, ನನ್ನ ಗೆಳೆಯರು ಇದ್ದುದನ್ನು ಅವರು ಬರೆದುದನ್ನು ಇದ್ದಕ್ಕಿದ್ದಂತೆಯೇ ನಾನು ಹೇಳಿದ್ದೇನೆಂದು ಮಾತ್ರ ನಂಬಿರುವೆನು. ಗೆ|| ಸಕೇಗಲ್ಲ ಪ್ರಲ್ಹಾದರಾಯರು ಗುರುದೇವನ ಇಡೀ 'ಗೀತಾಂಜಲಿ'ಯನ್ನೂ ಇನ್ನೂ ಅವರ ಬೇರೆ ಗೀತಗಳನ್ನೂ ಕನ್ನಡಿಗರಿಗೆ ಕನ್ನಡಿಸಿಕೊಡಲೆಂದು ನಾನು ಹಾರೈಸುತ್ತೇನೆ. ಅವರ ಹೊಸ ಕವಿತೆಗಳ ಗುಚ್ಛಗಳು ಬೇಗಬೇಗನೆ ಹೊರಬೀಳಲೆಂದು ನಾನು ಆಶಿಸುತ್ತೇನೆ.

"ಸಂಜೀವಿನಿ ಪ್ರಕಾಶನ"ಕ್ಕೆ ಮೊದಲನೆಯ ಪ್ರಕಾಶನವೆಂದು ಗೆ|| ಪ್ರಲ್ಹಾದರಾಯರನ್ನು ಕೇಳಿದೊಡನೆಯೇ ಈ ಸಂಕಲನವನ್ನು ನನಗೆ ವೇಳೆಗೆ ಸರಿಯಾಗಿ ಕೊಟ್ಟುದುದಕ್ಕೆ ಅವರಿಗೆ ವಂದನೆಗಳು. ಪ್ರಕಾಶನ ಕಾರ್ಯದಲ್ಲಿ ಸಹಾಯ ನೀಡಿದ ನನ್ನ ಮಿತ್ರವರ್ಯ ಶ್ರೀ ಬಸವಣ್ಣೆಪ್ಪ ಅಣ್ಣಾ ಸಂಕೇಶ್ವರರ ಉಪಕಾರವು ನನ್ನ ಮೇಲೆ ಅನಂತವಾಗಿದೆ.

೪-೫-೪೬ **ಕಲಮುದಾನಿ ಗುರುರಾಯ**

# ಬರೆದವನ ಬಿನ್ನಹ

ನನ್ನ ಬಾಳುವೆಯ ಈ ಹಾಡುಗಳನ್ನು ಬೆಳಕಿಗೆ ತರುವ ಹೊಣೆ ಹೊತ್ತು, ತಮ್ಮ "ಸಂಜೀವಿನಿ ಪ್ರಕಾಶನ"ದಲ್ಲಿ ಈ ನನ್ನ "ನಸುಕಿ"ಗೆ ಮೊದಲ ಮಾನ ಕೊಟ್ಟು ನನ್ನ ಬಗ್ಗೆ ಮುನ್ನುಡಿಯ ರೂಪದಲ್ಲಿ ಮಮತೆಯ ನಾಲ್ಕು ಮಾತು ಹೇಳಿದ ಸಂಪಾದಕ ಮಿತ್ರ ಶ್ರೀ ಕಲಮದಾನಿ ಗುರುರಾಯರಿಗೆ ನಾನು ಅತ್ಯಂತ ಉಪಕೃತನು. ಪುಸ್ತಕವನ್ನು ಬೇಗನೆ ಪೇಟೆಗೆ ತರಲು ನೆರವಾದ ಪ್ರಕಾಶಕರಿಗೂ ಮುದ್ರಕರಿಗೂ ನಾನು ಋಣಿ. ಈ ಪದಗಳನ್ನು ಈ ಮೊದಲು ಓದಿಸಿ ಕೇಳಿ ಮೆಚ್ಚಿದ ಇಷ್ಟಮಿತ್ರರಿಗೆ ವಂದನೆಗಳು. ಇವುಗಳಲ್ಲಿ ಕೆಲವು ಪದ್ಯಗಳು ಕೆಲ ಪತ್ರಿಕೆಗಳಲ್ಲಿ ಹಾಗು ಕವನಸಂಗ್ರಹಗಳಲ್ಲಿ ಅಚ್ಚಾಗಿದ್ದು ಆಯಾ ಪತ್ರಿಕೆ ಹಾಗು ಗ್ರಂಥಗಳ ಸಂಪಾದಕರಿಗೂ ನಾನು ಕೃತಜ್ಞನು.

ಜೀವನದಲ್ಲಿ ನಡೆದ ಸ್ಥಳಾಂತರಗಳ ಮೂಲಕ ನನ್ನ ಎಷ್ಟೋ ಕವಿತೆ ಕಳೆದುಹೋದವು. ಉಳಿದವುಗಳಾದರೂ ಇಷ್ಟು ದಿನ ಉಳಿದಿವೆಯೆಂದ ಬಳಿಕ ಉಳಿವ ಯೋಗ್ಯತೆ ಇವುಗಳಲ್ಲಿರಬಹುದೆಂದು ನಂಬಿ, ಗೆಳೆಯ ಕಲಮದಾನಿಯವರ ಸೂಚನೆಯ ಮೇರೆಗೆ ಪ್ರತಿ ಪದ್ಯಕ್ಕೂ ಅಲ್ಪ ಪರಿಚಯ ಬರೆದು ಇವನ್ನೆಲ್ಲಾ ಅಚ್ಚುಗೊಳಿಸಿದ್ದೇನೆ. ಇವುಗಳಲ್ಲಿ ನನ್ನವು ೪೧; ಇನ್ನು ಹತ್ತು ಶ್ರೀ ರವೀಂದ್ರ ಗುರುದೇವನ ವಂಗ 'ಗೀತಾಂಜಲಿ'ಯೊಳಗಿನ ೧೦ ಗೀತಗಳ ಕನ್ನಡ ರೂಪಗಳು. ಕೊನೆಯ ೬ ಗೀತಗಳಂತೂ ಇದೇ ವಾರದಲ್ಲಿ ಈ ಪ್ರಕಟನೆಗಾಗಿ ಕನ್ನಡಿಸಿದುವುಗಳು.

ಬಾಳುವೆಗೆ ಬೆಳಕನ್ನಿತ್ತು ಹಾಗು ಈ ಪದ್ಯಗಳಿಗೆ ಪ್ರೇರಣಾಪುರುಷರಾದ ಶ್ರೀ ಬೇಂದ್ರೆ ದತ್ತರಾಯರ ೫೦ನೆಯ ಹುಟ್ಟುಹಬ್ಬದ ವಸಂತೋತ್ಸವದ ಪ್ರಸಂಗದಲ್ಲಿ ಗುರುಭಕ್ತಿಯ ಕಾಣಿಕೆಯೆಂದು ನನ್ನ ಈ ೫೧ ಬಾಳಹಾಡುಗಳನ್ನು ಅವರ ಅಡಿಯಲ್ಲಿ ಅರ್ಪಿಸಿದ್ದೇನೆ.

ಅವ್ಯಯ ಸಂವತ್ಸರದ
ಅಕ್ಷಯ ತೃತೀಯೆ
ನ್ಯೂ ಇಂಗ್ಲಿಷ್ ಸ್ಕೂಲ್, ಹುಬ್ಬಳ್ಳಿ

**ಪ್ರಹ್ಲಾದ ನರೇಗಲ್ಲ**

## ಶ್ರೀಗುರುದೇವನ ಶ್ರೀವಚನ

ಆಮಿ ತೊಮಾಯು ಜತೊ
ಶುನಿಯಾಛಿಲೇಮ ಗಾನ
ತಾರ ಬದಲೆ ಆಮಿ
ಚಾಃಯು ನಾ ಕೊನೊ ದಾನ

× × ×

ಹಾಡಿರುವೆನೆನಿತೋ ಸಲ —
ನಿನ್ನ ಪದದಲಿ ಪ್ರಿಯಾ !
ಬೇಡ ಒಯಸೆನು ಪ್ರತಿಫಲ —
ನನ್ನ ಜೀವದ ಜೀಯಾ !

## ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| iv | ೮ | ಛಂದಗಳ | ಛಂದಗಳು |
| ೪ | ೬ | ಕವಿತಾ | ಕವಿತೆ |
| ೯ | ೧೦ | ಬೆಳಗಿಸಿದಂಧ | ಬೆಳಗಿಸಿದಂಥ |
| ೧೩ | ೨ | ಹಾಡುಸಳ | ಹಾಡುಗಳ |
| ,, | ೪ | ಂಗಗ್ರಹಿಸ | ಸಂಗ್ರಹಿಸ |
| ೧೬ | ೨೮ | ಪಾರತಂತ್ರ್ಯಕ್ಕಿ | ಪಾರತಂತ್ರ್ಯಕ್ಕೆ |
| ೨೩ | ೫ | ಭಕಿ | ಭಕ್ತಿ |
| ೨೪ | ೨೨ | ಕೃಷ್ಣೆಯನ್ನು | ತೃಷ್ಣೆಯನು |
| ೩೦ | ೨ | ಸಂತೈಷಲು | ಸಂತೈಸಲು |
| ೩೧ | ೩ | ...ಶಂಥ | ...ಸಂಥ |
| ೩೭ | ೮+೯ | ವಿ–ವಿಕಾಸ | ವಿ–ಕಾಸ |
| ೩೯ | ೨ | ...–೪೫ ಕ್ಕೆ | ...–೩೫ ಕ್ಕೆ |
| ೪೨ | ೩ | ಗಂಪಿಗೂ | ಗುಂಪಿಗೂ |
| ೪೬ | ೧೪ | ಬದ್ಧಳ | ಬದ್ಧಳು |
| ೪೮ | ೨ | ... –೪೨ ಕ್ಕೆ | ... – ೩೨ ಕ್ಕೆ |
| ೪೯ | ೩+೪ | ಹೊಸ್ತಿಲಲ್ಲ | ಹೊಸ್ತಿಲಲ್ಲಿ |
| ೫೫ | ೧೯ | ಪದ್ಮನನು | ಪದ್ಮವನು |

# ನಸುಕು

[ 'ನಸುಕು' ಪದ್ಯವು ೧೯೩೦ಕ್ಕೆ ಸಲ್ಲುವ ಚೈತ್ರ ಪೌರ್ಣಿಮೆ ದಿನ ಧಾರವಾಡದ ಬಾಲಮಾರುತಿ ಸಂಸ್ಥೆಯವರು ಏರ್ಪಡಿಸಿದ ಕನ್ನಡ ಕವಿತಾ ಸ್ಪರ್ಧೆಗೆ ಬರೆದುದು. ಆಗಿನ ನನ್ನ ರಾಷ್ಟ್ರೀಯ ಶಾಲೆಯ ಓರಗೆಯ ಗೆಳೆಯರೂ ಬರೆದರು. ನನಗೆ ಮೊದಲ ಮೆಚ್ಚು ದೊರೆಯಿತು. ಗು|| ಬೇಂದ್ರೆಯವರೂ ನನಗೆ ಹಲಿಗೆ ಮುಹೂರ್ತ ಮಾಡಿಸಿದ "ಕಾವ್ಯಾನಂದ" ಶ್ರೀ ಪುಣೇಕರ ನರಸಿಂಹಾಚಾರ್ಯರೂ ಪಂಡಿತ ಶ್ರೀ ಮ. ಪ್ರ. ಪೂಜಾರರೂ ಪರೀಕ್ಷಕರಾಗಿದ್ದರಂತೆ. ಮೆಚ್ಚಿನ ಹಣದಲ್ಲಿ ಶ್ರೀ ಬೇಂದ್ರೆಯವರು ನನಗೆ ಗದಾಯುದ್ಧ—ಲೀಲಾವತಿ ಕಾವ್ಯಗಳನ್ನು ಕೊಡಿಸಿದ್ದೂ, ಈ ಪದ್ಯಕ್ಕಾಗಿ ನನ್ನನ್ನು ಹರಸಿ ಒಂದು ಪದ್ಯ ಬರೆದದ್ದೂ ನೆನಪಿದೆ. ಅ 'ಹರಕೆ' 'ಗರಿ' ಯಲ್ಲಿಯೂ ಮಿಂಚಿನ ಬಳ್ಳಿಯ 'ನಾಡಿನ ಹಾಡುಗಳು' ಇದರಲ್ಲಿಯೂ ಅಚ್ಚಾಗಿದೆ. ನನ್ನ 'ನಸುಕು' ಮೊದಲು "ನಸುಕು" ಎಂಬ ಹೆಸರಿನ ಗೆಳೆಯರ ಗುಂಪಿನ ಕೈಬರಹದ ಕವಿತಾಸಂಗ್ರಹಕ್ಕೆ ಮೊದಲ ಪದ್ಯವಾಗಿತ್ತು. ಮುಂದೆ "ಸ್ವಧರ್ಮ"ವು ಗುಂಪಿನದಾಗಿದ್ದಾಗ ಶಕೆ ೧೮೪೯ ಪ್ರಭವ ಚೈತ್ರ ಸಂಚಿಕೆ ಸಂಪುಟ ೪ ಸಂಚಿಕೆ ೧ರಲ್ಲಿ 'ನಸುಕು' ಅಚ್ಚಾಗಿ ಗು|| ಶ್ರೀ ಬೇಂದ್ರೆಯವರ ಸವಿಯೊಂದಿಗೆ ಬೆಳಕು ಕಂಡಿತು. ಈ ಪದ್ಯ 'ಹಕ್ಕಿ ಹಾರುತಿದೆ' ಯಲ್ಲೂ ಇದೆ. ಗು. ಬೇಂದ್ರೆಯವರು ಈ ಪದ್ಯದ ಬಗ್ಗೆ ಹೀಗೆ ಬರೆದುದುಂಟು:—

"ಈ ಕವಿತೆಯು ಒಂದು ತಕ್ಕಡಿಯಂತಿದೆ. ಮೊದಲಿನ ಆರು ಸಾಲುಗಳಲ್ಲಿಯೂ ಕಡೆಯ ಆರು ಸಾಲುಗಳಲ್ಲಿಯೂ ಸಮಾನ ಮನೋಹರತೆಯುಳ್ಳ ಒಂದೊಂದು ರೂಪಕವಿದೆ. ಇವೇ ಎರಡು ಪರಡಿಗೆಗಳು. ಮಧ್ಯದ ಎರಡು ಸಾಲುಗಳು ಒಂದು ದಂಡಿಗೆಯಂತಿವೆ. ಇವುಗಳಲ್ಲಿ ಒಂದನೆಯದು ಮೊದಲ ಆರು ಸಾಲುಗಳ ಕಡೆಗೆ ಒಲವುಳ್ಳದ್ದೂ ಎರಡನೆಯದು ಕಡೆಯ ಆರು ಸಾಲುಗಳ ಕಡೆಗೆ ಒಲವುಳ್ಳದ್ದೂ ಇದೆ. ಹೀಗಾಗಿ ಸಮತೂಕವಾಗಿದೆ.

[ ಮೊದಲ ಆರು ಸಾಲುಗಳ 'ನಸುಕ'ನ್ನು ಕವಿಯೆಂದೂ ಎರಡನೆಯ ಆರು ಸಾಲುಗಳಲ್ಲಿ ಒಬ್ಬ ಸ್ತ್ರೀಯೆಂದೂ ರೂಪಿಸಿದೆ. ಮಧ್ಯದ ಎರಡು ಸಾಲುಗಳಲ್ಲಿ ಪ್ರಕಾಶಮಯನಾದ ಪರಮಾತ್ಮನು ರಾತ್ರಿಯಲ್ಲೆಲ್ಲ ಲಕ್ಷೋಪಲಕ್ಷ ಚಿಕ್ಕೆಗಳಲ್ಲಿ ಅಡಿ,

ಬೆಳಗಿನಲ್ಲಿ ಅದೇ ಆನಂದಮಯನಾದ ಪರಮಾತ್ಮನು ಲಕ್ಷೋಪಲಕ್ಷ ಹಕ್ಕಿಗಳಲ್ಲಿ ಹಾಡುತ್ತಿಹನೆಂದು ಕವಿಯು ಹೇಳುತ್ತಾನೆ. ಲೆಕ್ಕವಿಲ್ಲದ ಚಿಕ್ಕೆಗಳಿಂದ ತುಂಬಿದ ವಸಂತ ಮಾಸದೊಳಗಿನ ರಾತ್ರಿಯು ಅಪರಂಪಾರವಾದ ಬೆಳಕಿನ ಪ್ರಸ್ತಾವನೆಯಂತಿರುವದೆಂದೂ, ರಾತ್ರಿಗೂ ಹಗೆಲಿಗೂ ವಿರೋಧವಿಲ್ಲೆಂದೂ, ಹಾಗೆ ಕಾಣುವವರು ಕುರುಡರೆಂದೂ ಕವಿಯು ಅನ್ನುತ್ತಾನೆ. ಹಳವಂಡದಿಂದ ಉಂಟಾದ ಕನಸುಗಳು ಬೇರೆ; ಮುಂದೆ ಮೈದೋರುವ ಸತ್ಯದ ಮೊದಲು ಕಾಣುವ ನೆರಳಂತಿರುವ ಕನಸುಗಳು ಬೇರೆ. ಸತ್ಯದ ಮೇಲೆ ಸತ್ಯದ ಪರಿಗಳವೆ. ಒಂದು ಸತ್ಯದಿಂದ ಇನ್ನೊಂದು ಸತ್ಯಕ್ಕೆ ಹೋಗುವ ಹಾದಿಯು ದಿವ್ಯ ದೃಷ್ಟಾಂತಗಳದು. ಈ ಸತ್ಯವು ( ನನಸು ) ದೃಷ್ಟಾಂತ (ಕನಸು) ಗಳ ನಸುಕು ಇದ್ದಂತೆ. ಮತ್ತು ಈ ದೃಷ್ಟಾಂತಗಳ ಪರಿಪಾಕವೇ ಮುಂದಿನ ಸತ್ಯದರ್ಶನ. ಹೀಗೆ ಕವನವನ್ನು ಕಟ್ಟಿದ್ದಾನೆ. ' ನಸುಕಿ ' ನ ಕವಿಯು ರಾತ್ರಿಯನ್ನು ಕುರಿತು, ಮೂಗಿಗೆ ಕಂಪಾಗಿಯೂ ಮೈಗೆ ತಂಪಾಗಿಯೂ, ಕಿವಿಗೆ ಇಂಪಾಗಿಯೂ, ಕಣ್ಣಿಗೆ ಕೆಂಪು ಕೆಂಪಾಗಿಯೂ ಅಂತೂ ಇಂದ್ರಿಯಸುಖವಾಗಿ ಮನದ ಮನೆಯಲ್ಲಿ ಮೈದೋರುವ ಚೆಲುವಿಕೆಯೇ ಮೂಡಲ ಬೆಳಕೆಂಬ ಗಿಡದ ಬುಡದಲ್ಲಿ ಮಿಂದು ಮಡಿಬಟ್ಟೆಯುಟ್ಟ ಅಕ್ಕನಂತೆ ನಿಂತಿರುವಳೆಂದು ನಸುಕನ್ನು ಕಂಡು ಸಹೋದರಭಾವವನ್ನು ಅನುಭವಿಸಿದ ಕವಿಯು ಬಣ್ಣಿಸುತ್ತಾನೆ. ]

೧

“ ಜಗಕೆಲ್ಲ ಬಿದ್ದಿತ್ತೊ ಇಷ್ಟು ಹೊತ್ತಿರುಳೆಂಬ
ಕಂಪಾದುದೊಂದು ಕನಸು !
ಹಗಲಿನ್ನು ಬಂದು ಬೆಳಕಿನ ಸೊಬಗು ಬೆಳಗುವದು—
ಕನಸು ಆಗುವದು ನನಸು !

೨

ಕನಸು ಕನಸೆಂದು ಕಂಗಳರು ಕನಕರಿಸುವರು
ಕನಸು ಕನಸಾಗಬಹುದೇ ?
ಜನಿಸದಿರೆ ಕನಸಿನೊಳು ನನಸು, ನನಸಿನ ಜಗವು
ಕನಸಾಗಿ ಸಾಗಬಹುದೇ ?

೩

# ನಸುಕು

೧

"ಕನಸು ನನಸಿನ ಕಸುಕು, ನನಸು ಕನಸಿನ ನಸುಕು "
ಎಂಬ ಸವಿಗವನವನ್ನು
ಇನಿದಾಗಿ ಕಟ್ಟುತಿಹ ಕವಿಯಾಗಿ ಒಪ್ಪುವದು
ಬೆಳಗುಮುಂಜಾವು ಮುನ್ನ !

೨

ಚಿಕ್ಕಿಯಾಗಿರುಳೆಲ್ಲ ಮುಗಿಲಲ್ಲಿ ನಗೆಮೊಗದಿ
ಆಟವನ್ನಾಡಿ ದಣಿದು
ಹಕ್ಕಿಯಾಗೀಗ ಸಲೆ ಹಾಡುವನು ಇಂಪಾಗಿ
ದೇವ ತಾ ಮನದಿ ತಣಿದು !

೩

ಅಂದಲರ ಕಂಪಿನಲಿ ತಣ್ಣೆಲರ ತಂಪಿನಲಿ
ಪಾಡುಗಳ ಪೆಂಪಿನಲ್ಲಿ
ಕೆಂದಳಿರ ಕೆಂಪಿನಲಿ ಸೊಬಗೊಗೆವ ಸೊಂಪಿನಲಿ
ಮೈದೋರ್ವಲಂಪಿನಲ್ಲಿ !

೪

ಒಪ್ಪಾಗಿ ಚಿಗುರುತಿಹ ಮೂಡಲದ ಬೆಳಕಿನೊಳು
ಸೊಗಸುಳ್ಳ ಮನದಲಿಂದು
ಬಪ್ಪುತಿರುವದು ಬೆಳಗುಮುಂಜಾವು ನುಣ್ಪುಳ್ಳ
ಬೆಳಕನೀರಿಂದ ಮಿಂದು !

೫

ಚೊಕ್ಕಟವದೆಂತಹದೊ ಈ ಬಗೆಯ ಬೆಳಗುಮುಂ-
ಜಾವಿನಾ ಸೊಬಗು-ಸೊಗಸು !
ಅಕ್ಕ ನಸುಕೇ ! ಅಕ್ಕರದಿ ನಕ್ಕು ನನ್ನೀಯೀ
ಅಂತರಂಗವನು ನಗಿಸು !

# ಸರಸ್ವತಿಗೆ

[ ೧೯೩೩ ರಿಂದ ೩೪ ರವರೆಗೆ ಧಾರವಾಡದ ರಾಷ್ಟ್ರೀಯ ಶಾಲೆಯ ವಿದ್ಯಾರ್ಥಿಗಳಾಗಿದ್ದಾಗ "ಕಾವ್ಯ ಸೇವೆ" ಎಂಬ ಕೈಬರಹದ ವಾರಪತ್ರಿಕೆಯನ್ನು ನಾವು ಕೆಲವು ಎಳೆಗೆಳೆಯರು ಹೊರಡಿಸುತ್ತಿದ್ದೆವು. ಗುರುವರ್ಯರಾದ ಬೇಂದ್ರೆಯವರೂ ಖಾನೋಳಕರರವರೂ ಹಾಗು ಈಗ ದಿವಂಗತರಾದ ಪೂಜ್ಯ ಶ್ರೀ. ಹೊಸಕೆರೆ ಚಿದಂಬರಯ್ಯನವರೂ ನಮಗೆ ಈ ಕಾರ್ಯದಲ್ಲಿ ಪ್ರೇರೇಪಕರಾಗಿದ್ದರು. ಆಗ ಕಂದ ವೃತ್ತದಲ್ಲಿ ಕವಿತಾ ಬರೆವ ಹುಚ್ಚು ನಮಗಿತ್ತು. ಶ್ರೀ ಬೇಂದ್ರೆಯವರು ಹಿಂದಿನ ಕವಿಗಳ ಕಂದಗಳನ್ನು ಓದಿ ತೋರಿಸುತ್ತ ತಾವೂ ಬರೆದು ನಮ್ಮಿಂದ ಕಂದಗಳನ್ನು ಬರೆಯಿಸುತ್ತಿದ್ದರು. ಆಗ "ಕಾವ್ಯಸೇವೆ"ಗೆ ಬರೆದ ಅನೇಕ ಕಂದ ಪದ್ಯಗಳಲ್ಲಿಯ ೭ ಪ್ರಾರ್ಥನಾ ಪದ್ಯಗಳು ಇಲ್ಲಿವೆ. ಬಾಲ್ಯವು ತಾರುಣ್ಯದಲ್ಲಿ ಪರಿಣಮಿಸುತ್ತಿದ್ದಾಗಿನ ಮುಗ್ಧ ಮನೋಹರ ಹೃದಯದ ಕಲ್ಪಕತೆಯ ಭಾವನೆಗಳು ಇಲ್ಲಿ ಅಚ್ಚೊತ್ತಿ ಮೂಡಿವೆ. ]

೧

ಜಗಭಾಂಡ ತುಂಬಿ ತುಳುಕುವ
ಸೊಗಸೆಂಬೀ ಸೋಮವನ್ನು ಸೊಗದಿಂ ಕುಡಿದು
ನಗೆ ನಗುತ ನುಡಿಯನಾಡುವ
ಬಗೆಯೇ ಬಗೆ, ನಿನ್ನ 'ಕಾವ್ಯ ಸೇವೆ'ಯ ಬಿರುದು !

೨

ಕನ್ನಡ ಕಂದನು ನಾನೈ
ಉನ್ನತ ಉದಾತ್ತ ಭರತ ಬಾಲನು ನಾನೇ !
ಸನ್ನುತ ವಿಶ್ವಕುಮಾರನು,
ನನ್ನಿಯ ಜಗದಂತರಾತ್ಮಶಿಶುವೂ ನಾನೇ !

೩

ಅನಿಸಲಿ ಅನಿಸಲಿ ಜಗವೆನ-
ಗನಿ- ಅನಿಸಲಿ ತಾಯಿ ಜನಿಸಲನಿಸಿಕೆಯಿಂದು !
ನನಗೆ ವರ ನೀಡು ರಸವತಿ
ಅನಿಸಿಕೆಯಾ ಜಗದ ಮಗನು ಆಗಲಿ ಎಂದು !

## ಸರಸ್ವತಿಗೆ

೪

ಎರಕವು ಮರುಗಲು ಬರುವದೆ
ಇರುತಿಹುದದು ಅಂತರಂಗದಂಕುರವೊಂದು !
ನರನಿದರ ನೆರವಿನಿಂದಲೆ
ನೆರೆಯೆಲ್ಲರನೆನ್ನಬಲ್ಲ ತನ್ನವರೆಂದು !

೫

ಕನ್ನಡ ಕಂದನ ಮನದೊಳು
ನನ್ನಿಯು ನೀನಾಗಿ ಕವನ ನೆನಿಸುವ ಕನಸು
ಚಿನ್ನದ ರನ್ನದ ಮುಗಿಲಿನ
ಬಣ್ಣಂಗಳ ಬಗೆಯೊಳೀಗ ಬೀಳುತಲಿಹುದು !

೬

ಮನಸಿನ ಕರುಳಿನ ಕನಸನು
ನನಸನು ಮಾಡವ್ವ ! ಅಂತರಂಗದಿ ಮೂಡೌ !
ಇನಿದಾಗಿ ಹರಿವ ರಸಗಳು
ಜನಿಸಲಿ ನನಸಿನಲಿ ! ನನಸು ಕನಸಿನ ಗೊನೆಯು !

೭

‘ ಸತ್ಯವು ಸೊಬಗೇ;   ಸೊಬಗೂ
ಸತ್ಯವು’ ‘ಸೊಬಗುಳ್ಳ ಸುದ್ದಿ ಸೊಗಸಿನ ಸೂರಿ’ !
ನಿತ್ಯದೊಳೀ ಮಂತ್ರವ ಜಪಿ-
ಸುತ್ತಿರಲೀ ಸತ್ಯಸೃಷ್ಟಿ ಸೊಬಗಿನ ಸೃಷ್ಟಿ !

---

# ಬೇವು-ಬೆಲ್ಲ

[ಯುಗಾದಿಯ ದಿನ ಬೇವು ಬೆಲ್ಲ ಬೆರಸಿ ತಿನ್ನುವ ರೂಢಿಯುಂಟಷ್ಟೆ. 'ಈ ಬೇವು-ಬೆಲ್ಲ'ದ ಕಲ್ಪನೆಯಲ್ಲಿ ಅಗಾಧವಾದ ಸತ್ಯವೊಂದು ಒಡಮೂಡಿದೆ. ಜಗತ್ತಿನಲ್ಲಿ ಸುತ್ತಲೂ ವಿಷಮಯ ವಾತಾವರಣವೇ ಕಾಣುವದು. ಅದಕ್ಕೆ ಹೆದರದೆ ಮುಂದೆ ಸಾಗಿದರೆ ಅಮೃತಮಯವಾದ ಸತ್ಯಲೋಕದ ದರ್ಶನವಾದೀತೆಂದು ಪುರಾಣದೊಳಗಿನ 'ಅಮೃತಮಂಥನ' ಪ್ರಸಂಗವನ್ನು ರೂಪಕಗೊಳಿಸಿ ಇಲ್ಲಿ ಹೇಳಲಾಗಿದೆ. ]

೧

ಹೊಸದಿವಸವೀದಿವಸ ! ಇಗೊ ತಗೋ ಮೆಲ್ಲೀಗ !
ಬೆಲ್ಲ ಬೆರಸಿರುವ ಬೇವು !
ಹುಸಿಯಲ್ಲ!— ಹೊಸ ಹಾದಿಗರು— ಬೇವಿನೊಳು ಬೆಲ್ಲ-
ವನು ಕಾಣಬೇಕು ನಾವು !

೨

ಹೊಸ ಹಾದಿಗರು ತಾವು ಹಿಂದೊಮ್ಮೆ ಹುಟ್ಟಿಸಿದರೈ
ಬೇವಿನಲ್ಲಿ ಬೆಲ್ಲ
ವಿಷವು ಜನಿಸಿದ ಕಡಲಿನಲ್ಲಿಂದ ಪೀಯೂಷ-
ವನ್ನವರು ತೆಗೆದರಲ್ಲ !

---

# ಹೊಸ ಬಟ್ಟೆ

[೧೯೨೧ ರಲ್ಲಿ ಮಹಾತ್ಮಾ ಗಾಂಧಿಯವರ ಸತ್ಯ ಅಹಿಂಸೆಗಳ ಹೊಸ ಹಾದಿಗೆ ಮನಮೆಚ್ಚಿ ಪರೋಪಕಾರವೇ ಪುಣ್ಯವೆಂಬುದನ್ನು ನೆಚ್ಚಿ ಗೀತಾಪತಿಯಾದ ಕೃಷ್ಣನನ್ನು ಮೆಚ್ಚಿಸಲು ಇದೇ ದಾರಿಯೆಂಬ ಮಾತನ್ನು ಅಚ್ಚುಮೆಚ್ಚಿನಿಂದ ಭಕ್ತಿಯಿಂದ ಒಡಮೂಡಿಸಲಾಗಿದೆ. ]

೧

ತಾನು ಬಲ ಜಗವು ಬಲವೆಂದು ಧರಣಿಯ ತಿರುಳ
ತಿಳಿಯದಲೆ ಕೆಲಜನರು ಗಳಹುತಿಹರು !
ಜ್ಞಾನಿಯದ ಬಲವೆಂದು ತಿಳಿವನೇ ಕಣ್ಮುಂದೆ
ಮರಮರನೆ ಮರುಗುತಿರೆ ಜಗದ ಜನರು ?

೨

ಅನ್ಯರೆಲ್ಲರ ನನ್ನಿ ಸುತ ಹೃದಯದೊಳು ತನ್ನ
ಪರಹಿತದೊಳೊಪ್ಪಿಸುವದರೊಳಿರುವದು !
ನನ್ನಿಯಂತಃಕರಣದೊಳು ತೀರ ತಿಳಿಯಾಗಿ
ಪ್ರೋಕ್ತ ಪರಮಾತ್ಮನಂ ಪೂಜಿಸುವದು !

೩

ಎನಿತು ಸೊಬಗಿನದು ! ಸೌಭಾಗ್ಯವೈ ! ಹಿಗ್ಗೆ ಸೈ
ಜನತೆಗೋಸುಗ ಸಾಯ್ವುದು !
ಅನಿತಲ್ಲವಿನಿತಲ್ಲವಿದು ಸತ್ತ್ವ ! ದೇವನಪ್ಪುದು !
ಕೃಷ್ಣ ಪರತತ್ತ್ವವು !

೪

ಇದೆ ಸತ್ಯವಿದೆ ಜ್ಞಾನವಿದರೊಳಗೆ ಶಾಂತಿಯಿದೆ
ದೊಡ್ಡವರ ದಾರಿ ಜೀಯಾ !
ಮುವದಿ ನೀ ಹಾಕಿಕೊಟ್ಟಿಹ ಬಟ್ಟೆ ನಿನ್ನನ್ನು
ಮುಟ್ಟಲ್ಕೆ ಕೃಷ್ಣರಾಯಾ !

# ಸ್ವರಾಜ್ಯ ಸ್ಥಾಪನೆ

[ ಈ ೩ ಕಂದಪದ್ಯಗಳನ್ನು ೧೯೩೧ ರ ರಾಜಕೀಯ ಹೋರಾಟದ ಕಾಲಕ್ಕೆ ನನ್ನ ತಾಯಿ ತಂಗೆಂದಿರ ಸಲುವಾಗಿ ಬರೆದೆನು. ಮನೆಯ 'ಗೌರಿ'ಯನ್ನು ನಾಡಿನ ಗೌರಿಯೆಂದು ನಮ್ಮ ಹೆಣ್ಣುಮಕ್ಕಳು ಬಗೆದು ಭಾವಿಸಿ ಎಂದು ಪೂಜಿಸುವರೋ ಅಂದೇ ಭಾರತಕ್ಕೆ ಬಿಡುಗಡೆ ಎಂಬ ಭಾವನೆ ಇಲ್ಲಿ ಮುಖ್ಯವು. ]

೧

ಸೂಸುವ ಶೌರ್ಯದ ಮಕ್ಕಳೆ
ಈ ಸಂಪತ್ ಶುಕ್ರವಾರದಲಿ ಬಲುಹಿನಲಿ
ತೋಷದಿ ಪ್ರೇಮದಿ ಭಾರತ
ಭಾಸುರ ಸ್ವಾತಂತ್ರ್ಯ ಗೌರಿಯನು ಸ್ಥಾಪಿಸುವಾ !

೨

ಪಂಚ ಪ್ರೇಮದ ಭಾಗ್ಯದ
ಸಂಚಯದೀ ಸುಸ್ವರಾಜ್ಯ-ಮಾಲಕ್ಷ್ಮಿಗೆ ನಾವ್
ಪಂಚಪ್ರಾಣಗಳಾರತಿ -।
ಯಂ ಚೆಲ್ವಿಕೆಯಿಂದ ಬೆಳಗುವಾ ನಲಿನಲಿದು!

೩

ಭ್ರಾಂತವಾದಂಥ ಭುವನದಿ
ಶಾಂತಿಯ ಸೂಸುತ್ತನಂತ ಸಂತಸವುಳ್ಳ
ಪಂಥಯುತ ಕಾಂತಿವಂತರ
ಕ್ರಾಂತಿಯ ಕಾರ್ಯವಿದು ಭಾರತೀಯರ ಕಾರ್ಯ !

---

# ಭಾರತದ ಭಾಗ್ಯತಿಲಕ

[ ಮಹಾತ್ಮರು ಭಾರತದ ರಾಜಕೀಯ ನಾಯಕರಾಗುವ ಮೊದಲು ಲೋಕಮಾನ್ಯರು ಭಾರತದ ಏಕಮಾತ್ರ ನಾಯಕರಾಗಿದ್ದರಷ್ಟೆ. ಅವರ ನಿಧನದ ಕಾಲಕ್ಕೆ ನಾವು ಎಳೆಗೆಳೆಯರು ಕೂಡಿ ಕಾವ್ಯಸೇವೆಯ ' ಲೋಕಮಾನ್ಯ ವಿಶೇಷ ಸಂಚಿಕೆ ' ಯೊಂದನ್ನು ಹೊರಡಿಸಿದ್ದೆವು. ಅದಕ್ಕಾಗಿ ಬರೆದ ಪದ್ಯವಿದು. ಲೋಕಮಾನ್ಯರ ಅಲೌಕಿಕ ಗುಣಗಳನ್ನೆಲ್ಲಾ ನೆನೆದು ಅವರನ್ನುದ್ದೇಶಿಸಿ ಬರೆದ ಶೋಕಗೀತವಿದು. ]

೧

ನಸುಕಿನೆಸಕವ ನೋಡಲರಿಯದೆ
ಕುಸಿದು ಕುಗ್ಗುತ್ತಿರಲು ವಸುಧೆಯು
ನಸು ನಗುತ ಹೊಸ ಬೆಳಕ ಬೆಳಗಿಸಿದಂಥ ಹೊಸ ಹೊತ್ತೇ !

೨

ವಿಷದ ಬೇವದು ವಿಶ್ವದೊಳು ವ್ಯಾ-
ಪಿಸಿರೆ ಅಮೃತದ ಕಿರಣಗಳ ಪಸ-
ರಿಸುತ ಬೆಲ್ಲದ ಭೂಮಿಯನು ಮಾಡಿರುವ ತಿಂಗಳನೇ !

೩

ಸಾಕು ಸಾಕೀ ಪಾರತಂತ್ರ್ಯವು
ಬೇಕು ವರ ಸ್ವಾತಂತ್ರ್ಯವೆಂಬೀ
ಭೀಕರದ ಗರ್ಜನೆಯ ಗೈದಿಹ ಭರತ ಕೇಸರಿಯೇ !

೪

ನಾಕದಾ ಸೌಂದರ್ಯವನ್ನೀ
ಲೋಕದೊಳು ಸ್ಥಿರವಾಗಿ ಸ್ಥಾಪಿಸಿ
ಲೋಕಮಾನ್ಯನೆ ಎಂದು ಹೆಸರಾಗಿರುವ ಬಲವಂತಾ !

೫

ಮೇರೆಯಿಲ್ಲದ ಬುದ್ಧಿಯಲಿ ಗೀ-
ತಾ ರಹಸ್ಯವನರಿತು ಜನರಿಗೆ
ಸಾರಿ ಸಾರಿದೆ ಪಾರತಂತ್ರ್ಯವು ನರಕಸಮವೆಂದು !

೬

ಶಾರದಾಂಬೆಯ ಸರಸ ಹೃದಯದ
ಸಾರವನು ಸಲೆ ತಿಳಿದುಳಿದು ನೀ
ಭಾರತಾಂಬೆಯ ಭಾಗ್ಯತಿಲಕನೆ ಆದೆ ಲೋಕದೊಳು !

# ಶ್ರೀ ಬಸವೇಶ್ವರರಿಗೆ

---

[ ೧೯೩೧ ರಲ್ಲಿ ಮೊಟ್ಟಮೊದಲಿಗೆ ಶ್ರೀ ಬಸವ ಜಯಂತಿಯು ಸಾರ್ವಜನಿಕವಾಗಿ ಧಾರವಾಡದಲ್ಲಿ ಆಚರಿಸಲ್ಪಟ್ಟಿತು. ಧಾರವಾಡದ ಶ್ರೀ ಉಳವೀ ಬಸವೇಶ್ವರ ದೇವಾಲಯದಲ್ಲಿ ಜರುಗಿದ ಉತ್ಸವಕ್ಕೆ ಗು. ಬೇಂದ್ರೆಯವರೊಡನೆ ನಾವು ಕೆಲವು ಗೆಳೆಯರು ಹೋಗಿದ್ದೆವು. ಆ ಉತ್ಸವಕ್ಕೆಂದೇ ಗೆಳೆಯರ ಗುಂಪಿನ ವತಿಯಿಂದ ಬೇಂದ್ರೆಯವರೂ ನಾವು ಕೆಲವು ಎಳೆಗೆಳೆಯರೂ ಬರೆದ ಪದ್ಯಗಳಲ್ಲಿ ಇದು ನನ್ನ ಪದ್ಯವು. ೧೯೩೨ ರಲ್ಲಿ ಜಯಕರ್ನಾಟಕದಲ್ಲಿ ಇದು ಅಚ್ಚಾಗಿತ್ತು. ]

೧

ತಾಯಿತಂದೆಯು ಒಂದರಲ್ಲಾದ ಪರಶಿವನ
ಪರಮ ಪ್ರಸಾದವುಂಡು
ನಾಯಗೊಲ್ಲುತ್ತ ಬಂದಿರಿ ನಂದಿಕೇಶ್ವರರೆ
ಜಗದಿ ಕಹಿಯನ್ನು ಕಂಡು !

೨

ಬಸವೇಶ್ವರರೆ ಜಗದಿ ನೆಲಿಸಿರುವ ಹೊಸತನದ
ಕಟ್ಟಿಸಕ ಸಿಟ್ಟಿಸುತ್ತ
ಎಸೆದಿರೀ ವಸುಧೆಯಲಿ ಜಗದ ಜನರೊಳು ಜಗದ
ಹೊಸತನವ ಹುಟ್ಟಿಸುತ್ತ !

೩

ಕೈಲಾಗದೀ ಜಗದ ಜನರು ಅರಡಿಗೊಂಡು
ನಿಮ್ಮ ಹಾರೈಸುವಾಗ್ಗೆ
ಕೈಲಾಸವನ್ನೆ ಇಳೆಗಿಳಿಸಿ ಅರಡಿಯಿಟ್ಟು
ಬಂದಿರಾರೈಸಲಾಗ್ಗೆ !

## ಶ್ರೀ ಬಸವೇಶ್ವರರಿಗೆ

೪

ಚಿಕ್ಕಂದಿನಿಂದ ಅಂಗಕ್ಕೆ ಮೆಚ್ಚಿದವರ್ಗೆ
ಮೀಸಲಿನ ವಚನವುಣಿಸಿ
ಅಕ್ಕರದಿ ಜಗದಂಗವನ್ನು ಶಿವಲಿಂಗದಲಿ
ಇರಿಸಿ ಜಂಗಮವ ತಣಿಸಿ

೫

'ತಿಳಿವೆ' ಎಂದಿಳೆಯ ತಿರುಳಲ್ಲಿರುವ ತಿಳಿವನ್ನು
ತಿಳಿದ ನಿಮಗಂಗವೆಲ್ಲಿ !
'ಉಳಿವೆ' ಕೂಡಲದಲ್ಲೆ ಎಂದು ಉಳಿದಿರಿ ನೀವು
ಪರಮಾತ್ಮಲಿಂಗದಲ್ಲಿ !

---

# ವಿಜಯ ವಿದ್ಯಾರಣ್ಯರಿಗೆ

[ ೧೯೩೨ ರಲ್ಲಿ ಶ್ರೀ ವಿದ್ಯಾರಣ್ಯ ಪುಣ್ಯತಿಥಿಯು ಸಾರ್ವಜನಿಕವಾಗಿ ಆಚರಿಸಲ್ಪಡಹತ್ತಿತು. ಆಗ್ಗೆ ಆ ಪ್ರಸಂಗಕ್ಕೆ ಬರೆದ ಪದ್ಯವಿದು. ಬಿಚ್ಚು= ಸ್ವಾತಂತ್ರ್ಯ. ]

೧

ನನ್ನಯೀ ನಾಡಿನಲ್ಲೊಪ್ಪನ್ನು ಹಾಕಿದಂತಹ ಒಪ್ಪೆ ಇಂದು ಒಪ್ಪು!
ನನ್ನಿಯಲಿ ನಾಡನ್ನು ನೆನೆಸಿದಂತಹ ನನಸೆ ಬಿಗಿತಾಗಿ ಬಂದು ಅಪ್ಪು!

೨

ತಾಯಿಯೊಡಲಿನ ಕಡಲಿನಲ್ಲಿದ್ದ ಸವಿಸವಿದು
ಸವಿಯು ಸೀಸಾಗಿ ಬಂದು
ಸಾಯಲಿಕ್ಕಾದ ಜಗದಲ್ಲೆಲ್ಲ ಸವಿ ಸುರವಿ
ಸೀ ಮಾಡಿ ಬಿಟ್ಟೆ ಅಂದು !

೩

ಮುಗಿಲಿನಲಿ ಮೊಳಮೊಳಗುವಂಥ ' ಬಿಚ್ಚು ' ನ್ನೊಡನೆ
ತಂದು ಬಂದೀ ಜಗಕ್ಕೆ
ತಗಲಿಸಿದಿ— ದಾಸ್ಯದಿಂದಗಲಿಸಿದಿ ಮಾಧವನೆ !
ಜಯ ನಿನ್ನಯಾ ಮೊಗಕ್ಕೆ !

೪

ಜೀವಕಳೆಯುಳಿದಂಥ ಜನರ ಮೈ-ಮನಸು-ಮಾತುಗಳಲ್ಲಿ
ಪ್ರೀತಿಯಿಂದ
ದೇವನಲ್ಲಿರುವಂಥ ಸೊಗಸನ್ನು ಸೃಜಿಸಿದೆಯೊ
ಸೊಬಗುಳ್ಳ ರೀತಿಯಿಂದ !

೫

ಕಲಿಗಳನು ಕನ್ನಡದ ರಾಜ್ಯದಲಿ ಕಲ್ಪಿಸಿದಿ
ನಿನ್ನಯಾ ರಾಜ್ಯದಲ್ಲಿ !
ಕಲಿಯುಗದ ಹೊಟ್ಟೆಯೊಳು ಕೃತಯುಗವ ಹುಟ್ಟಿಸಿದಿ
ಅಂದು ಸ್ವಾರಾಜ್ಯದಲ್ಲಿ !

# ನೀಲಗಿರಿ

[ " ನನ್ನದು ಈ ಕನ್ನಡನಾಡು " ಎಂಬ ಕನ್ನಡ ನಾಡ ಹಾಡುಗಳ ಸಂಗ್ರಹದ ಪುಸ್ತಕವು ನಮ್ಮ ಗೆಳೆಯರ ಗುಂಪಿನ ವತಿಯಿಂದ ೧೯೩೮ ರಲ್ಲಿ ಅಚ್ಚಾಯಿತು. ಅದರಲ್ಲಿ ಕರ್ನಾಟಕದ ಎಲ್ಲ ವಿಭಾಗಗಳ ಪರಿಚಯದ ಪದ್ಯಗಳನ್ನು ಸಂಗ್ರಹಿಸಲಾಗಿತ್ತು. " ನೀಲಗಿರಿ " ಮಾತ್ರ ಇಲ್ಲವೆಂದು " ಕನ್ನಡಿಗ " ಪತ್ರಿಕೆ ಎಚ್ಚರಿಸಿತು. ಆಗ್ಗೆ ನಾನು ಬರೆದ ಪದ್ಯವಿದು. ಮುಂದೆ " ಹಕ್ಕಿ ಹಾರುತಿದೆ " ಎಂಬ ಗೆಳೆಯರ ಕವಿತಾಸಂಗ್ರಹದಲ್ಲಿ ಅಚ್ಚಾಯಿತು. ]

ಮೂಡಲ ಪಡುವಲ
ಗಿರಿಗಳ ಸಾಲಿನ
ವನಗಳ ಮಾಲೆಯ
ತಳದಲಿ ತೊಳಗುವ
ಚೆನ್ನ ರನ್ನವಿದು ಹಾ
ರನ್ನ ಚೆನ್ನವಿದು ಹಾ !

ಕನ್ನಡ ಕಡಲಿನ
ಕಂದನು ಕೃಷ್ಣನು
ನವೋನವ್ಯವಹ
ನಿತಾಂತಸುಂದರ
ನಿಜ ವನಮಾಲಾ
ನೀಲರತ್ನವನು
ತನ್ನಯ ತಾಯಿಗೆ
ಒಪ್ಪಿಸಿದಂತಹ
ಒಪ್ಪೆಂತಹದಯ್ಯಾ ?
ಒಪ್ಪೆಂತಹದಯ್ಯಾ !

ಕನ್ನಡ ತಾಯಿಯ
ಮೋದದ ಪಾದದ
ಬಳಿಯಲಿ ಬಂದಂ-
ಗಳದಲಿ ಆಡುವ
ವಿಶ್ವಾನಂದದ
ನಂದನರಿಗೆ ಆ
ವಿಧಾತ ಗೈದಿಹ
ನಂದನ-ವನ ಆ-
ನಂದನವನವಯ್ಯಾ
ನಂದನವನವಯ್ಯಾ !

———

# ಭರತಾರ್ಪಣ

[ ಈ ಪದ್ಯವನ್ನು ನಾನು ೧೯೩೯ ರಲ್ಲಿ "ಶ್ರೀ"ಯವರು ಧಾರವಾಡಕ್ಕೆ ಬಂದಾಗ ಅವರ ಮುಂದೆ ಓದಬೇಕೆಂದು ಬರೆದೆ. ಇದು ಆಗ ಜಯಕರ್ನಾಟಕದಲ್ಲಿಯೂ "ಕಾವ್ಯ ಸಾಮ್ರಾಜ್ಯ" ವೆಂಬ ಕವಿತಾ ಸಂಗ್ರಹದ ಮೊದಲ ಆವೃತ್ತಿಯಲ್ಲಿಯೂ ಅಚ್ಚಾಯ್ತು.

ಶ್ರೀ ರವೀಂದ್ರ ಗುರುದೇವನ "ಹೆ ಮೊರ ಚಿತ್ತ ಪುಣ್ಯತೀರ್ಥೇ ಜಾಗೊತ ಧೀರೇ" ಎಂಬ ಗೀತಾಂಜಲಿಯೊಳಗಿನ ಬಂಗಾಲಿ ಪದದ ಕನ್ನಡ ಭಾವಾನುವಾದ. ಶಾಂತಿನಿಕೇತನ ಆಶ್ರಮದ ಅಂತರ್ರಾಷ್ಟ್ರೀಯ ಪದ.]

ಈ ತನುಮನ
ಭರತಾರ್ಪಣ
ಓ ಮನ್ಮನ
ಮನ್ಮಾತೆಯ
ಪುಣ್ಯಸ್ತನ-
ವನ್ನೀಕ್ಷಣ
ಕುಡಿ ತತ್ಕ್ಷಣ
ಸಲ್ಲಕ್ಷಣ
ನ ವಿಲಕ್ಷಣ
ಓ ಮನ್ಮನ
ಈ ತನುಮನ
ಭರತಾರ್ಪಣವು !

*

ಮಾನವ್ಯವು
ಇಹ ದಿವ್ಯವು
ನವ ನವ್ಯವು
ಅಹ ಭವ್ಯವು
ಬಹು ವಿಶ್ರುತ
ವೀ ಭಾರತ !

ಇಲ್ಲಿಯೆ ರತ
ವಲ್ಲವೆ ಹಿತ !
ತತ್ ಪ್ರೇಷಿತ
ಮತ್ ಸ್ನೇಹಿತ
ಓ ಮನ್ಮನ
ಪ್ರಿಯ ಮನ್ಮನ
ಈ ತನುಧನ
ಭರತಾರ್ಪಣವು !!

*

ಅಲ್ಲಿಂದಲೊ
ಎಲ್ಲಿಂದಲೊ
ಇಂತೀ ಜನ
ಬಂತೀ ಕ್ಷಣ
ನೆಲೆ ನಿಲ್ಲದ
ಸೆಲೆ ಸಲ್ಲದ
ನದಿ ನದಿಗಳು
ಮುದ ಬೀರುತ
ಅದೊ ಬಂದವು
ಇದೊ ಸಂದವು

ನೀರ್ ಮಿಕ್ಕಿತು
ಕಡಲುಕ್ಕಿತು
ಓ ಮನ್ಮನ
ಮೀಯ್ ತನುಮನ
ತನುಮನಧನ
ಭರತಾರ್ಪಣವು !!

*

ಆರ್ಯರ ಕುಲ
ದ್ರಾವಿಡ ಫಲ
ಆಕೊ ಚೀಣರು
ಶಕ ಹೂಣರು
ಪಾರಸಿಕರು
ಪಾಠಾಣರು
ಮೊಗಲ್ ರಸಿಕರು
ಪ್ರಿಯ ಪ್ರಾಣರು
ಒಂದೇ ಶಿರ
ಒಂದೇ ಮನ
ಈ ತನುಮನ
ಭರತಾರ್ಪಣವು !

*

ಆ ಪಡುವಲ !
ದಾ ಬಾಗಿಲ
ಆಗೊ ತೆರೆಯಿತು
ಇಗೊ ನೆರೆಯಿತು
ಹೊಸ ಹೊಸ ಜನ
ಸುವಿಲಕ್ಷಣ
ಹೊಸ ಸಂಗತಿ
ಸೋಜಿಗ ಶ್ರುತಿ
ಹೊಸ ಕಾಣಿಕೆ
ಮನಗಾಣಿಕೆ
ಒಂದೇ ಶಿರ
ಒಂದೇ ಮನ
ಈ ತನುಧನ
ಭರತಾರ್ಪಣವು!!

*

ಒಂದೇ ಶಿರ
ಒಂದೇ ಮನ
ಭಾರತ ನರ-
ನಾರಾಯಣ
ತಲೆದೂಗುವೆ
ತಲೆಬಾಗುವೆ
ಕೈಮುಗಿಯುವೆ
ಮೈಯೊಗೆಯುವೆ
ನಿನ್ನಡಿಯೊಳು
ನನ್ನಯ್ಯನೆ
ಕಲ್ಯಾಣವ
ಮನಗಾಣುವ
ಭಾರತ ನರ-
ನಾರಾಯಣ
ತನುಮನಧನ
ನಿನಗರ್ಪಣವು !!

# ಜಯ ಹಿಂದ!

[ ಶ್ರೀ ಸುಭಾಸಚಂದ್ರರಿಂದ ನಿರ್ಮಿತ 'ಹಿಂದ ರಾಷ್ಟ್ರೀಯ ಸೈನ್ಯದ' ತ್ರಿಮೂರ್ತಿ ಚಮೂಪತಿಗಳಾದ ಸೈಗಲ್-ಧಿಲನ್-ಶಹಾನವಾಜರ ಖಟ್ಲೆಯು ದಿನಾಂಕ ೫-೧೧-೪೫ ಕ್ಕೆ ಕೆಂಪು ಕೋಟೆಯಲ್ಲಿ ಪ್ರಾರಂಭವಾಯಿತಷ್ಟೆ. ಅಂದು ಅಖಿಲಭಾರತದಲ್ಲಿ 'ಆಜ್ಹಾದ ಹಿಂದ ಫೌಜ' ದಿನಾಚರಣೆ ಆಚರಿಸಲ್ಪಡಬೇಕೆಂದು ರಾಷ್ಟ್ರಪತಿಗಳು ಅಪ್ಪಣೆ ಕೊಟ್ಟಿದ್ದರಿಂದ ಬೆಳಗಾವಿಯಲ್ಲಿಯೂ ಸಭೆ ನೆರೆದಿದ್ದಿತು. ಅಂದು ನಾನು ಬೆಳಗಾವಿಯಲ್ಲಿದ್ದೆ. ಅಂದಿನ ಸಭೆಯಲ್ಲಿ ಕನ್ನಡ ಪದ್ಯ ಮೊದಲು ಹೇಳಬೇಕೆಂದು ರಾಷ್ಟ್ರೀಯ ಸೇವಾದಳದ ಆ ಊರ ಸ್ವಯಂಸೇವಕರುಗಳಿಗೆ ಈ ಪದ್ಯವನ್ನು ಬರೆದು ಕೊಡಲಾಯಿತು. ಆ ಪ್ರಕಾರ ಅಂದು ಈ ಪದ್ಯ ಸಭೆಯಲ್ಲಿ ಹಾಡಲ್ಪಟ್ಟಿತು. ನಮ್ಮ ಈ ಸೇನಾಪತಿಗಳ ಕೂದಲಿಗೆ ಮುಟ್ಟಿದರೆ ಜೋಕೆ ಎಂದು ಶ್ರೀ ಶರಚ್ಚಂದ್ರ ಬೋಸರು ಆದೇ ನಾನಾ ಕಡೆಗಳಲ್ಲಿ ಮಾಡಿದ ಭಾಷಣದಲ್ಲಿ ಗುಡುಗುತ್ತಿದ್ದರು. 'ಶತ್ರುನಾಶ' ಎಂಬುದು ನೇತಾಜಿಯವರು ತಮ್ಮ ಸೈನಿಕರಿಗೆ ಕೊಟ್ಟ ಬಿರುದುಗಳಲ್ಲೊಂದು ಎಂದು ಪತ್ರಿಕೆಯಲ್ಲಿ ಅಚ್ಚಾಗಿತ್ತು. ಸೈನ್ಯದ ಕವಾಯತಿನ ಛಂದಕ್ಕೆ ಅನುಕೂಲವಾಗುವಂತೆ ವೃತ್ತದ ಘಾಟಿಯುಂಟು. ]

೧

ಶ್ರೀ ಸುಭಾಸ ಚಂದ್ರರಿಂದ ಭಾರತವು ಸ್ವತಂತ್ರಾ!
"ಜಯ ಸ್ವತಂತ್ರ ಹಿಂದ ಸೈನ್ಯ" ಇದೇ ಇಂದು ಮಂತ್ರಾ!

೨

ಈ ಸ್ವತಂತ್ರ ಭೂಮಿಗಿದೇ ಪ್ರಥಮ ಸೈನ್ಯತಂತ್ರಾ!
ಎದುರು ಬರುವರಾರು ಬರಲಿ! ಅಪರಹರು ಅತಂತ್ರಾ!

೩

ಶೂರ ಸೈಗಲ್ ಧೀರ ಧಿಲನ್ ವೀರ ಶಹಾ ನವಾಜರು!
'ಶತ್ರು ನಾಶ' ಕೀರ್ತಿ-ಲಕ್ಷ್ಮಿ ಭೋಸ್ಲೆ ಕ್ಷಾತ್ರತೇಜರು!

೪

ಈ ಸ್ವತಂತ್ರ ಚಮೂಪತಿಗಳಾಂಗ್ಲ ವಶವೊಳೇಕೆ?
ಇವರ ಕೂದಲಿಳಿಯ ಮುಟ್ಟಿದರೆ ಇಕೋ ಜೋಕೆ!

೫

ನಾಮರಹಿತವಾಯ್ತು ಪೃಥ್ವಿಯಲ್ಲಿ ಪರತಂತ್ರತೆ!
ರೋಮ ರೋಮ-ರಕ್ತ ರಕ್ತದಲ್ಲಿ ಸ್ವಾತಂತ್ರ್ಯ!

# ಮೊದಲ ಗೆಳೆಯ

[ ಈ ಪದ್ಯದಿಂದ ಆರಂಭಿಸಿ ಇನ್ನು ಮುಂದೆ ಇಲ್ಲಿ ಅಚ್ಚಾದ ೨೨ ಪದ್ಯಗಳು ನನ್ನ ವಯಸ್ಸಿನ ೧೪ ರಿಂದ ೨೬ ರ ವರೆಗಿನ ಎಂದರೆ ೧೯೨೦ ರಿಂದ ೧೯೩೨ ರ ವರೆಗಿನ ಒಂದು ತರದ ಅವಧಿಯಲ್ಲಿ ನನ್ನ ಜೀವನದಲ್ಲಿ ಅತಿ ಮಹತ್ವದ ಸ್ಥಾನವನ್ನು ಪಡೆದ ಕೆಲವು ಗೆಳೆಯರ ವಿಷಯಕವಾಗಿ ಬರೆದವುಗಳು. ಗು. ಬೇಂದ್ರೆಯವರ ಕೇಂದ್ರತ್ವದಲ್ಲಿ ವಿಕಾಸಗೊಂಡ ‘ ಗೆಳೆಯರ ಗುಂಪಿ’ ನ ಚರಿತ್ರೆಯಲ್ಲಿ ಜೀವನದ ವಿಕಾಸಕ್ಕಾಗಿ ‘ ಗೆಳೆತನ’ ಕ್ಕೆ ಅತ್ಯಂತ ಉನ್ನತ ಸ್ಥಾನವಿತ್ತು. ಗೆಳೆತನದ ಸಿದ್ಧಿಗಾಗಿ ಅನೇಕ ಸಾಧನಪ್ರಯೋಗಗಳನ್ನು ನಾವು ಕೈಕೊಂಡು ನೆರವೇರಿಸಿದೆವು. ಆ ಪ್ರಯೋಗದ ಫಲಗಳೇ ಈ ‘ ಗೆಳೆತನದ ಗೀತಗಳು. ’ ಆಗ ಗೆಳೆಯರು ಅನೇಕರು ಬರೆದ ಕವಿತೆಗಳಲ್ಲಿ ಇದೊಂದು ಸಾಹಿತ್ಯ ಪ್ರಕಾರವೇ ಬೆಳೆದು ಬಂದಿತು. ಇಲ್ಲಿ ಇರುವ ಈ ಮೊದಲ ಪದ್ಯವು ನನ್ನ ಬಾಳುವೆಯ ಮೊದಲ ಗೆಳೆಯನು ಕೆಲಕಾಲ ಬೇರೊಂದೂರಿಗೆ ಹೋದಾಗ ಅವನನ್ನು ಎಂದು ಕಾಣುವೆನೋ ಎಂದು ಹಂಬಲಿಸುವ ಭಾವನೆಗಳನ್ನು ಹುಣ್ಣಿವೆಯ ಚಂದ್ರನ ಮುಂದೆ ತೋಡಿಕೊಂಡುದುಂಟು. ]

೧

ಎಂದು ಕಾಣುವೆನಂದ ಗೆಳೆಯನ
ಇಂದು ಮುಖವನ್ನಿಂದು-ದೇವನೆ
ಇಂದು ನೀನಿಳೆಗಂದ ಬಗೆಯಿಂದಂದವಾಗಿಪ್ಪಾ-
ನಂದವನು ಕೊಡುವಂದದೆನಗವ
ನಂದ ಸೌಖ್ಯವನಿಂದಿನನ್ನೆಗ
ಚೆಂದ ಬಗೆಯೊಳು ಕೊಟ್ಟನದರೊಳು ಮಿಂದು ಮಿಂದೆನು ನಾ!

೨

ತಂದೆ ತಾಯ್ಗಳು ದೂರವಿದ್ದರು
ಬಂಧು ಬಾಂಧವರಿಲ್ಲದಿದ್ದರು
ಗಂಧ-ಪರಿಮಳ-ದ್ರವ್ಯವಿರದಿರೆ ದುಃಖವೆನಗಿಲ್ಲ !
ಚಂದ್ರದೇವನೆ ಸಕಲ ವಿಬುಧರ
ವೃಂದದಲಿ ನೀನೊಬ್ಬನೇ ನನ-
ಗಿಂದು ಪ್ರಿಯನಿರುವಂದದಲಿ ನನಗೊಬ್ಬನೇ ಗೆಳೆಯ !

# ಶ್ರೀ ಕೃಷ್ಣನಿಗೆ

[ ಗೆಳೆಯರು ನನಗೆ ನನ್ನ ಜೀವನದಲ್ಲಿ 'ದೈವಸ್ವರೂಪ'ರಾಗಿ ತೋರಿದ್ದುಂಟು. ದೇವರು ಕಾಣಿಸಿಕೊಳ್ಳುವದು ಗೆಳೆಯರ ರೂಪದಲ್ಲಿ ಎಂಬುದು ನನ್ನ ಬಾಳುವೆಯ ಒಂದು ನಂಬಿಗೆ. ಭಕ್ತಿಯಲ್ಲಿ ಸಖ್ಯಭಕ್ತಿಗೂ ಒಂದು ಪ್ರಮುಖಸ್ಥಾನವಿದೆಯೆಂಬು ದನ್ನು ಬಲ್ಲವರೇ ಬಲ್ಲರು. ಬಾಲ್ಯದ ಭಕ್ತಿಯ ಭಾವನೆಗಳಿಂದ ಮಿಶ್ರಿತವಾದ ಕೆಲವು ಉದ್ಗಾರಗಳು ಇಲ್ಲಿ ವ್ಯಕ್ತವಾಗಿವೆ. ]

೧

ಶೇಷಶಯನ ಶ್ರೀ ಕೃಷ್ಣನೆ,
ಸೂಸುವ ಸಂತೋಷದಿಂದ ಬಾರೈ ಬಳಿಗೆ !
ದೋಷಗಳು ದಹಿಸಿ ಹೋಗಿವೆ,
ಪೋಷಿಸು ಮನ್ನಿಸುತ ಗೆಳೆಯ ! ಗೆಳೆಯರ ಗೆಳೆಯಾ !

೨

ತಾತಾ ತ್ರಿಗುಣಾತೀತಾ !
ಕೈ ತಾ ! ಕೈ ತಾರೊ ನಿನ್ನ ಮಲ್ಲಿಗೆ- ಕೈ ತಾ !!
ಪ್ರೀತಿಯ ಕೈಯಂ ತಾ ಸಂ-
ಪ್ರೀತಿಯ ಬೆರಳುಳ್ಳ ಕೈಗಳಂ ತಾ ! ತಾತಾ !!

೩

ಮಿಡುಗುವೆ ತಾತಾ ತೊಡೆಯನು
ಕೊಡು ಕೊಡು ಶ್ರೀಕೃಷ್ಣ ನಿನ್ನ ತೊಡೆಗಳ ಮೇಲೆ
ಕಡು ಸೊಗಸಿನಿಂದ ತಲೆಯ-
ನ್ನಿಡುತ ಗಡದ್ದಾಗಿ ಮಲಗಿ ನಿದ್ದೆಯ ಮಾಳ್ಪೆ !

೪

ಬೆರಳಂ ಚೀಪುತ ಚೀಪು-
ತ್ತರಳಿದ ನಗೆಮೊಗದ ಸೊಬಗ ನೋಡುತ ನೋಡು-
ತ್ತೆರಕದ ತೊಡೆಯೊಳು ಮಲಗುವೆ !
ಕರವನು ಮೇಲಿಟ್ಟು ಚುಕ್ಕುಚುಕ್ಕೊ ಬಡೆಯೈ !!

# ಗೆಳೆತನದ ಎಣಿಕೆ

[ ಚಿಕ್ಕ ಪ್ರಾಯದಲ್ಲಿ 'ಜೀವದ ಗೆಳೆಯ'ನ ಹೆಸರು ಹೇಳುವುದು ಒಂದು ಅಭಿಮಾನದ ಸಂಗತಿ. ಚಿಕ್ಕ ಮಕ್ಕಳಲ್ಲಿ ಈ ಬಗೆಯ ಜಾನಪದ ಗೀತಗಳು ಅನೇಕ ಇವೆ. ಅಂಥ ಗೀತಗಳ ದಾರಿಯಲ್ಲಿ ಇದೊಂದು ಅಂಕಿಗಳ ಎಣಿಕೆಯ ಹಾಡು. ಮೊದಲ ಚರಣವನ್ನು ಒಬ್ಬನು ಹೇಳುವದು; ಎರಡನೆಯ ಚರಣದ ಪ್ರಶ್ನೆಯನ್ನು ಅವನ ಬೇರೊಬ್ಬ ಗೆಳೆಯನು ಕೇಳುತ್ತ ಹೋಗುವದು ಹೀಗೆ ಇದರ ತಂತ್ರ. ಗೆಳೆತನದ ಆವಿಷ್ಕರಣಕ್ಕೆ ತಕ್ಕಂತೆ ಅಂಕಿಗಳು ಬೆಳೆಯುತ್ತ ಸಾಗುವವು. ]

೧

ಒಂದಂಬೋದು ಕುಂದದ ಪ್ರೇಮವು ! —
ಎರಡಂಬೊದೇನೈ ಸಖ ಹೇಳೋ !

೨

ಎರಡಂಬೋದು ಎರಕದಿಂದೆರೆಯೋದು ! —
ಮೂರಂಬೊದೇನೈ ಸಖ ಹೇಳೋ !

೩

ಮೂರಂಬೋದು ಪ್ರೇರಣೆಯ ಮಾರ್ಗವು !—
ನಾಕಂಬೊದೇನೈ ಸಖ ಹೇಳೋ !

೪

ನಾಕಂಬೋದು ಆಕಳ ಹಾಲ ಕುಡಿಯೋದು ! —
ಐದಂಬೋದೇನೈ ಸಖ ಹೇಳೋ !

೫

ಐದಂಬೋದು ಪ್ರೀತಿಲಿ ತೊಟ್ಟ ತೊಡೆ ! —
ಆರಂಬೊದೇನೈ ಸಖ ಹೇಳೋ !

೬

ಆರಂಬೋದು ಆ ತೊಡೆಯ ಮೇಲೆ ಮಲಗೋದು ! —
ಏಳಂಬೊದೇನೈ ಸಖ ಹೇಳೋ !

೭

ಏಳಂಬೋದು ತೋಳನಿಂದಟ್ಟಮಿಟ್ಟ ! —
ಎಂಟಂಬೊದೇನೈ ಸಖ ಹೇಳೋ !

೮

ಎಂಟಂಬೋದು ಒಂಟಿತನ ಒಳ್ಳೇದಲ್ಲ ! —
ಒಂಭತ್ತಂಬೊದೇನೈ ಸಖ! ಹೇಳೋ !

೯

ಒಂಭತ್ತಂಬೊದು ತುಂಬಿದ ಹಂಬಲ ! —
ಹತ್ತೊಂಬೊದೇನೈ ಸಖ ಹೇಳೋ !

೧೦

ಹತ್ತಂಬೋದು ಗುಟ್ಟಿನ ಗೆಳೆತನ ! —
ಹನ್ನೊಂದಂಬೊದೇನೈ ಸಖ ಹೇಳೋ !

೧೧

ಹನ್ನೊಂದಂಬೊದು ಹೃನ್ಮಯ ಶ್ರೀಕೃಷ್ಣ ! —
ಇನ್ನೊಮ್ಮೆ ಹೇಳೈ ಜೀವದ ಗೆಳೆಯನ ಹೆಸರ !

———

# ಮುನಿದ ಮನೋಹರನಿಗೆ

[ ಗೆಳೆತನದಲ್ಲಿ ಕಾಲಕಾಲಕ್ಕೆ ಮುನಿಸು ತನ್ನ ಲೀಲೆಯನ್ನು ತೋರಿಸಿ ಪ್ರೀತಿಯನ್ನು ಹೆಚ್ಚು ಅಳಗೊಳಿಸುತ್ತದೆ. ಪ್ರಿಯ ಗೆಳೆಯನು ಪ್ರೀತಿಸುವದಿಲ್ಲವೆಂದು ಜೀವವು ಚಡಪಡಿಸುತ್ತಿದ್ದರೂ ತನ್ನ ಸಹಜ ಪ್ರೀತಿಯನ್ನು ತಾನು ಬಿಡುವದಿಲ್ಲ. ನೈದಿಲೆ ಅರಳಲೊಲ್ಲದೆ ಸುಮ್ಮನೆ ಇದ್ದರೂ ಚಂದ್ರನು ತನ್ನ ಪ್ರೀತಿಯ ಬೆಳ್ದಿಂಗಳನ್ನು ಚೆಲ್ಲದೆ ಬಿಡನು ಎಂಬ ರೂಪಕವೇ ಇಲ್ಲಿ ಮುಖ್ಯವು. ]

೧

ನನ್ನೆರಕ ನಿನ್ನಲ್ಲಿ ನೀನು ನನ್ನಿಸಲೊಲ್ಲಿ
ಏಕಿಂಥ ಮುನಸುಗೇಡು !
ಮನ್ನಿಸೀ ಮನವಿಯನು ನನ್ನಿಸಿನ್ನಾದರೂ
ಬಿಡು ಅಂಥ ಹಂಥವಾಡು !

೨

ತಿಂಗಳಿನ ಒಡಲೊಳಗೆ ಬೆಳ್ದಿಂಗಳಡಗೀತೆ—
ನೈದಿಲೆಯದಿಲ್ಲದಾಗೆ ?
ಇಂಗಡಲು ಇಂಗೀತೆ ? ನನ್ನಿಯದು ಹಿಂಗೀತೆ ?
ಇಂಗಿತವ ಕಾಣೊ ಹೀಗೆ !

———

# ಕೊಳಲಿನ ಗೆಳೆಯನಿಗೆ

[ಸಖ್ಯಭಕ್ತಿಯಿಂದ ಹೃದಯವು ತುಂಬಿದಾಗ ಕೃಷ್ಣನ ಕೊಳಲಗಾನವೇ ಅತ್ಯಂತ ಪ್ರಿಯವಾಪುದು. ಆ ಹಾಡಿನ ಇಂಪು ಬಾಳುವೆಯ ಇಂಪಾಗಲೆಂದು ಪ್ರಾರ್ಥಿಸಿದ ಕೆಲವು ಕಂದ ಪದ್ಯಗಳು ಚಿಕ್ಕಂದಿನ ರಮ್ಯತೆಯನ್ನು ನೆನಪಿಗೆ ತಂದು ಕೊಡುತ್ತವೆ.]

೧

ಇಳೆಯಿದೆ ನಿನ್ನಯ ಕೊಳಲಿದೆ
ಗೆಳೆಯನೆ ನೀ ಬೆಳೆವ ಕಳೆಯ ಕೊಳಲನ್ನಿನ್ನು
ಘಳಿಲನೆ ತಳೆದೂದುತ್ತಲಿ,
ಕಳೆಗೊಳಿಸೈ ಇಳೆಯ ಮಕ್ಕಳನು ಮತ್ತೊಮ್ಮೆ !

೨

ಎಸಕದ ನಿನ್ನಾ ಕೊಳಲಿನ
ಹೆಸರಿನ ಹೂಬಿಸಿಲಿನಿಂದ ಹಸನಿಸು ಮುಖವ !
ಹೊಸಹೊಸದಿಹ ಕೊಳಲೊಳಗಿನ
ನಸು ಬಿಳಿ ಬೆಳ್ದಿಂಗಳಿಂದ ರಸನೆಯ ಹಸಿಸೋ !

೩

ಇನಿಇನಿದಾದ ಸಿನಾದದ
ನನೆನಗೆಯಿಂದೊಪ್ಪುತಿರುವ ಕೊಳಲೊಳಗಿಂದ
ದನಿಗೈಯುತ ಗೈಯುತ್ತಲಿ
ಹಣಿಸುತ ಹರ್ಷವನು, - ತಣಿಸು ತನುಮನಗಳನು !

೪

ಅಚ್ಚರಿಯ ಕೊಳಲ ಕೃಷ್ಣನೆ
ಬಿಚ್ಚಿಟ್ಟಿಹ ಜಗದ ಅಂತರಂಗದ ರಂಗ !
ಹೆಚ್ಚಿನ ಕೊಳಲಿನ ಹಾಡಿನ
ಅಚ್ಚನ್ನೇ ಹಾಕು ನಮ್ಮ ಕೆಚ್ಚೆದೆಯಲ್ಲಿ !

೫

ಬಾರಿಸುತ ಬಾರಿಸುತ್ತಲಿ
ಪ್ರೇರಣೆಯಂ ಪ್ರೇರಿಸುತ್ತ ಪ್ರೇರೇಪಿಸು ಭೋ !
ಪ್ರೇರಕನೇ ತಾರಕನೇ
ನಾರಾಯಣ ನಿನ್ನ ನರನ ನೆನಪಿಗೆ ತಂದು !

# ಶ್ರೀ ಕೃಷ್ಣನ ಕಾಣಿಕೆ

[೧೯೨೧ ರಲ್ಲಿ ಶ್ರೀ ಬೇಂದ್ರೆಯವರು “ ಕೃಷ್ಣಾ ಕುಮಾರಿ ” ಎಂಬ ೨೭ ವಾರ್ಧಿಕ ಪದ್ಯಗಳ ಖಂಡಕಾವ್ಯವನ್ನು ಬರೆಬರೆವಾಗಲೇ ನನಗೆ ಓದಿ ತೋರಿಸುತ್ತಿದ್ದರು. ಅವರ ಆ ಮನಮೋಹಕ ವೇದಾಂತ ಕಾವ್ಯವು ಮನಸ್ಸಿನಲ್ಲಿ ಪ್ರಭಾವ ಬೀರಿದ್ದಾಗ ಈ ಕೆಲವು ಪದ್ಯಗಳಲ್ಲಿ ಸುದಾಮಕೃಷ್ಣರ ಗೆಳೆತನದ ಕತೆಯನ್ನು ನಾನು ಬರೆದೆ. ನಿಷ್ಕಾಮ ಭಕ್ತಿಯನ್ನೇ ದೇವರು ಬಯಸುವನೆಂದು ನನಗನಿಸಿದ ಮೇರೆಗೆ ಇಲ್ಲಿ ಚಿತ್ರಿಸಲಾಗಿದೆ.]

೧

[ಒಂದಾನೊಂದು ದಿನ ಸುದಾಮನ ಸಹಧರ್ಮಿಣಿ ತನ್ನ ಪತಿರಾಯನನ್ನು ಕುರಿತು ಹೀಗೆ ನುಡಿದಳು:- ]

ಭಾಗ್ಯವನು ಬಳೆದುಕೊಂಡಿಹರು ಕೆಲ ಜನರು ಸೌ-
ಭಾಗ್ಯವನು ಸುರಿದುಕೊಂಡಿಹರು ಹಲ ಜನರು ಸೌ-
ಭಾಗ್ಯತಿಲಕನೆ ಕೇಳು ಭಾಗ್ಯಲಕ್ಷ್ಮಿಯು ನಮ್ಮ
ಗುಡಿಸಲವ ತೊಲಗಿ ತಾನು !
ಈಗ್ಗೆ ಹೋದಳು - ನೆಲೆಯು ಹತ್ತದೀ ಬಡತನದ
ತಗ್ಗಿನೊಳಗಿಂದ ಹೊರಬರುವ ಹಾದಿಯು ಕಾಣೆ
ಮುಗ್ಗಿ ಹೋಗಿದೆ ಮನವು ತಗ್ಗಿ ಹೋಗಿದೆ ತನುವು
ನಮಗೆ ಯಾರಿಲ್ಲವೇನು ?

೨

[ಆಗ ಅಂತಃಕರಣಕ್ಕೆ ಒಳಬಳಗಿಂದೇ ಅಳುವು ಬಂದು ಸುದಾಮನು ತನ್ನ ಪತ್ನಿಗೆ ಈ ಪ್ರಕಾರ ಹೇಳಿದನು:-]

ಬಂಧುಬಳಗದ ಜನರು ಯಾರಿಲ್ಲ, ಅಣ್ಣ ತ-
ಮ್ಮಂದಿರನು ನಾನು ಹುಟ್ಟಾ ಕಾಣೆ ಮಡದಿಯೇ
ಮುಂದೆ ಕರೆವವರಿಲ್ಲ ಹಿಂದುಮುಂದಿಲ್ಲ ಹಾಯ್
ನಮಗೀಗ ಯಾವನಿಲ್ಲ !
ಇಂದು ನೆರವಿನ ನರನು ನಮಗಿಲ್ಲ ಜಗದಲ್ಲಿ
ಹಿಂದೆ ಗುರ್ವಾಶ್ರಮದೊಳಿದ್ದನೊಬ್ಬನು ಕೃಷ್ಣ
ಚೆಂದ ಚೆನ್ನಿಗ ಚೆಲುವ– ದ್ವಾರಕೆಯೊಳಿರುವಾತ–
“ ಎಳೆಮನದ ಗೆಳೆಯ ” ನೊಬ್ಬ !

## ಶ್ರೀ ಕೃಷ್ಣನ ಕಾಣಿಕೆ

[ ಕೃಷ್ಣನಿಂದಾದರೂ ತಮ್ಮ ಬಡತನ ಬತ್ತೀತೆಂದು ಬಗೆದು ಸಹಧರ್ಮಿಣಿಯು "ಕೃಷ್ಣನ ಕಡೆಗೆ ಹೋಗಿ ಬರ್ರಿ" ಎಂದು ಹೇಳಿದ್ದಕ್ಕೆ ಸುದಾಮನು ಒಪ್ಪಿ ಎಲ್ಲಿಂದಲೋ ಒಪ್ಪಿಡಿ ಅವಲಕ್ಕಿಯನ್ನು ಪತ್ನಿ ತಂದು ಕೊಟ್ಟದ್ದನ್ನು ತೆಗೆದುಕೊಂಡು ಹೊರಟು ದ್ವಾರಕೆಗೆ ಬಂದು ತನ್ನ ಗೆಳೆಯನಿಗೆ ಹೀಗೆ ಹೇಳಿದನು:- ]

೧

ಒಪ್ಪಿಡಿಯ ತುಂಬಿರುವ ಅವಲಕ್ಕಿಯನು ತಗೋ
ಒಪ್ಪಾಗಿ ಒಪ್ಪುತಿಹ ಭಾಗ್ಯಲಕ್ಷ್ಮಿಯ ನಲ್ಲ
ಅಪ್ಪಯ್ಯ ನಿನಗೇದು ತಂದಿರುವೆನೀ ಒಂದೆ
ಹಿಡಿಯ ಅವಲಕ್ಕಿಯನ್ನು !
ಉಪ್ಪಿಲ್ಲ ಊಟಕ್ಕೆ ತುಪ್ಪವಿಲ್ಲವು ತುಟಿಗೆ
ಕಪ್ಪಿಟ್ಟು ಹೋಗಿರುವೆ ಮತ್ತೆ ಮೇಲಿಂದ ಮೇಲ್
ಬಪ್ಪ ಬಡತನವನ್ನು ಭಂಗಿಸೋ ಹಿಂಗಿಸೋ-
ಭಾಗ್ಯವನು ಸೂರೆಗೊಳಿಸೋ !

೨

ಕೃಷ್ಣ ಕೊಳಲಿನ ಕೃಷ್ಣ ! ಕೆನೆವಾಲ ಕೃಷ್ಣನೇ !
ಕೃಷ್ಣೆಯಾ ದೇವಕಿಯ ಶವಿಮಾವೆ–ಗಿಳಿಮಾವೆ !
ವಿಷ್ಣುವರ್ಣಗಳುಳ್ಳ ವಿಶ್ವವನು ವ್ಯಾಪಿಸಿದ
ಭಾಗ್ಯಸ್ವರೂಪ ರೂಪ !
ನಿಷ್ಣಾತ ಯೋಗೀಂದ್ರ ಬವರದಲ್ಲಿಯ ಬಂಟ !
ಉಷ್ಣತೆಯು ಹೃದಯವನು ತುಂಬಿಹುದು ಹೃದಯದೀ
ಕೃಷ್ಣೆಯನು ಕಡೆಗೋಲ ಬೆಣ್ಣೆಯಲಿ ಸಂತೈಸಿ
ಸೊಗಸುಗೊಳಿಸೀಗ ಬೇಗ !

೩

ನೋಯುತ್ತ ನರಳುವೆನು ಬೇಯುತ್ತ ಬಳಲುವೆನು
ಕಾಯವೀ ತೋಯದೊಳು ತೋಯುತ್ತ ತೊಳಲುವದು
ಕಾಯಬೇಕೆನ್ನ ಮಿತ್ರನೆ ಮೀಯಿಸೀಗ ನಿನ್ನಯ
ನನ್ನಿ-ನನ್ನಿಯಲ್ಲಿ !

ನೋಯುತ್ತ ಬಸಿಯುತಿಹ ಗಾಯವನ್ನಾರೈಸಿ
ಮಾಯಿಸ್ಸೆ, ಸೀಯಾದ ತೋಯವನು-ಪೀಯೂಷ-
ಪ್ರಾಯವಹ ತೋಯವನು ತಾಯೀಗ ಸಾಯುವೆನು
ನೀರಡಿಕೆಸಾವಿನಿಂದ !

೬

[ ಆಗ ಶ್ರೀಕೃಷ್ಣನು ಪ್ರೇಮಾಂತಃಕರಣದಿಂದ ಗೆಳೆಯನನ್ನು ಬಿಗಿಕಾಗಿ ಅಪ್ಪಿ ಕೊಂಡು ಇಂತೆಂದನು:-]

ಅಣ್ಣಯ್ಯ ಅಲ್ಲಯ್ಯ ಈ ಸೊಲ್ಲು ಸಲ್ಲದೈ
ಕಣ್ಣೀರುಗಳು ತುಂಬಿ ಕೋಡಿಯೊಡೆಯುವದೀಗ
ತಣ್ಣನ್ನ ಶಿಲೆಯಂತೆ ನಾನೇನು ಕೂತಿರುವದಿಲ್ಲವೋ
ಇಲ್ಲ ಇಲ್ಲ !
ನಿನ್ನನ್ನು ನಿನ್ನ ಮೊಗವನು ನೋಡಿ ಜೀವದ-
ಲ್ಲಿನ್ನು ಕಳೆ ಬಂದಿತ್ತೈ, ಮೊಗದಲ್ಲಿ ನಗೆ ಬಂತು
ಅಣ್ಣಯ್ಯ ನನ್ನದೀ ಭಾಗ್ಯವೆಲ್ಲವು ನಿನ್ನದೇ,
ನನ್ನದಿರುವದಿಲ್ಲ !

೭

ಮೇಳ:-

ಕೃಷ್ಣನೂರೊಳಗೆ ಗೆಳೆಯನು ಇರುವ ಕಾಲದಲಿ
ಕೃಷ್ಣನೇ ಉಪಚರಿಸಿ ಕಳಿಸಿದನು ಕೊಡದೆ ಗಡ,
ಕೃಷ್ಣ ಕೊಡದದ್ದೆ ತನ್ನೂರಿಗೈತಂದ ಬಳಿಕಾಯಿತ್ತೈ
ಭಾಗ್ಯ ಸಾಕ್ಷಾತ್ !
ಕೃಷ್ಣನೀಯುವ ಬೇವೆ ಮಾವಾಗಿ ಫಲಿಸುವದು !
ಕೃಷ್ಣನೀಯುವ ಕನಸೆ ನನಸಾಗಿ ಜನಿಸುವದು !
ಕೃಷ್ಣ ಕೊಡುವಂಥ ವಿಷ ಪೀಯೂಷವಾಗಿ ರುಚಿಸುವದೀಗ
ಪೃಥ್ವಿಯಲ್ಲಿ !

# ಅಗಲಿದ ಗೆಳೆಯನಿಗೆ

[೧೯೨೩ ರಲ್ಲಿ ಧಾರವಾಡದ ರಾಷ್ಟ್ರೀಯಶಾಲೆಯ ವಿದ್ಯಾರ್ಥಿಯೂ ಆ ಶಾಲೆಯ "ಕಾವ್ಯಸೇವೆ" ಎಂಬ ಕೈಬರಹದ ಕವಿತೆಗಳ ಸಾಪ್ತಪತ್ರಿಕೆಯ ಮೊದಲಿಗನೂ ಆದ ಗೆಳೆಯ ಮಲ್ಹಾರ ಲಿಂಗೋ ಕುಲಕರ್ಣಿ ಆಕಸ್ಮಿಕವಾಗಿ ತೀರಿಕೊಂಡಾಗ ಬಂದ ಉದ್ಗಾರಗಳು ಕೆಳಗಿನ ಕಂದ ಪದ್ಯಗಳಲ್ಲಿ ವ್ಯಕ್ತವಾಗಿವೆ. ಬಿಚ್ಚು= ಸ್ವಾತಂತ್ರ್ಯ.]

೧

ಅಗಲಿದನು ನಗೆಯ ಗೆಳೆಯನು !
ಮುಗಿಲೊಳು ಹಾರಾಡುವಂಥ ಹಕ್ಕಿಗಳಲ್ಲಿ !
ಹೊಗುತಪುಗಳಿಂದ ಬಿಚ್ಚನು—
ಸೊಗಸಿನ ಬಿಚ್ಚನ್ನೆ ತಾನು ತರಹೋಗಿಹನು !

೨

ಅಭಯವ ನೀಡುತ ಭಾರತ-
ಸಭದಲಿ ನಲಿದಾಡುತಿರುವ ಚಿಕ್ಕೆಗಳಲ್ಲಿ
ವಿಭವದ ಗೆಳೆಯನು ಹೋದನು
ಸೊಬಗನ್ನೇ ಸೆಳೆದುಕೊಂಡು ಬರಹೋಗಿಹನು !

೩

ಕೆಚ್ಚೆದೆಯ ಗೆಳೆಯನೋ ಇಣ್-
ಮುಚ್ಚುಣಿಕೆಯ ಆಟವಾಡುತಚ್ಚರಿಗೊಳಿಸಿ
ಮುಚ್ಚಿದ ನನ್ನೀ ಕಣ್ಗಳು
ನಿಚ್ಚಳವಾಗುವದರೊಳಗೆ ಅಡಗಿದನೆಲ್ಲೋ !!

೪

ನಲಿಯುತ ನಲಿನಲಿಯುತ್ತಿಹ
ಇಳೆಯಲ್ಲಿಯ ಕಳೆಯು ಗೆಳೆಯನಳಿದನು ಹಾ ಹಾಯ್ !!
ತಿಳಿಯದದು ಹೊಳೆಯಲೊಲ್ಲದು
ಉಳಿಯುವ ಬಗೆಯೆಂತು ಗೆಳೆಯನಿಲ್ಲದ ಇಳೆಯೊಳ್ ?

# ಮುದ್ದು ಮಗು ' ವಿಮಲ ' ಗೆ

[ ಗೆಳೆಯರೊಬ್ಬರ ೩ ವರ್ಷದ ಮಗು ಮುದ್ದು ವಿಮಲೆಯೊಡನೆ ನಾಕಾರು ತಿಂಗಳು ಕೂಡಿ ಆಡುವಾಗ ಆಳೆಯನ್ನು ಆಡಿಸುವಾಗ ಬರೆದುದು. ]

ಮುದವೇ ವಿಮಲಾ ಬಾಳುವೆಬೆಲ್ಲಾ
ಇದುವೇ ಪಲ್ಲನ ಹಾಡಿನ ಪಲ್ಲಾ || ಪಲ್ಲ ||

೧

ನೀನು ಬೆಲ್ಲಾ ನೀನೇ ಬೆಲ್ಲಾ !
ನಿನ್ನ ಪಲ್ಲಾಕಾಕಾನು ಬೆಲ್ಲಾ
ನೀನೂ ಬೆಲ್ಲಾ ನಾನೂ ಬೆಲ್ಲಾ
ಬೆಲ್ಲಾ ಬೆಲ್ಲಾ ಎಲ್ಲಾ ಬೆಲ್ಲಾ !

೨

ನಮ್ಮ ವಿಮಲನ ಸಕ್ಕರೆ-ಕೈಗೆ
ಒಂದು " ಪಾಪಾ " ಒಂದೇ " ಪಾಪಾ "*
ಸವಿಸವಿ " ಪಾಪಾ " ಸಿಹಿಸಿಹಿ " ಪಾಪಾ "
ಚೊಕ್ಕ ಪಾಪಾಗೆ ತಕ್ಕ ಪಾಪಾ !

೩

ನಮ್ಮ ವಿಮಲನ ಒಳ್ಳೆ ಬಾಯಿಗೆ
ಒಂದು ಬೆಲ್ಲಾ ಒಳ್ಳೇ ಬೆಲ್ಲಾ †
ತಾತಾ ಬೆಲ್ಲಾ ತೋತೋ ಬೆಲ್ಲಾ
ಕಳ್ಳ ವಿಮಲಗೆ ಒಳ್ಳೆ ಬೆಲ್ಲಾ !

* ಪಾಪಾ:- ಮುದ್ದು (ಮರಾಠಿ), ಕೂಸು (ಕನ್ನಡ, ಬಾಲಿಶ ಭಾಷೆ)
† ಬೆಲ್ಲ:- ಮುದ್ದು (ಕನ್ನಡ, ಬಾಲಿಶ ಭಾಷೆ)

## ಮುದ್ದು ಮಗು 'ವಿಮಲ'ಗೆ

೧

ನಮ್ಮ ವಿಮಲನ ಮುದ್ದು ಗದ್ದಕೆ
ಒಂದು ಮುದ್ದು ಸದ್ದಿಲ್ಲದ ಮುದ್ದು
ನನೆ ನನೆ ಮುದ್ದು ಇನಿಇನಿ ಮುದ್ದು
ಮುದ್ದು ವಿಮಲಗೆ ಶುದ್ಧ ಮುದ್ದು !

೨

ನಮ್ಮ ವಿಮಲನ ತುಂಬುಗಲ್ಲಕೆ
ಒಂದು ಚುಂಬನ ಸಂಭ್ರಮುಚುಂಬನ
ಅಂದ ಚುಂಬನ ಚಂದ ಚುಂಬನ
ಚುಂಬನಸಂಭ್ರಮು ಸಂಭ್ರಮಾ……
ಸಂಭ್ರಮಾ !

———

# ಜೋಗುಳ

[ ೧೯೩೨ ಜೂನ್ ತಿಂಗಳಲ್ಲಿ ಜಯಕರ್ನಾಟಕ ಪತ್ರಿಕೆಯ ಸಹಸಂಪಾದಕನೆಂಬ ಸಂಬಂಧದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರವಾಸ ಮಾಡುತ್ತಿರುವಾಗ, ದಾವಣಗೆರೆಯಲ್ಲಿ ಶ್ರೀ ಆರಗಂ ಲಕ್ಷ್ಮಣರಾಯರು ( ಶ್ರೀ ಹೊಯ್ಸಳರು ) ತಮ್ಮ ಮಗುವಿನ ಹುಟ್ಟಿದ ದಿನವೆಂದು ಗೆಳೆಯರೆಲ್ಲರಿಗೆ ಔತಣ ಹೇಳಿದ್ದರು. ಊಟ-ಉಪಚಾರವಾದ ಬಳಿಕ ಮಗುವಿಗೆ ಹರಕೆ ಕೊಡಬೇಕೆಂದು ಎಲ್ಲರಿಗೂ ಕೇಳಿದರು. ಆಗ ಬರೆದ ಪದ್ಯವಿದು. ]

ಕೇಳಿರಿ ಗೆಳೆಯರಿರಾ
ಎಲ್ಲರು
ಹೇಳಿರಿ ಜೋಗುಳವಾ ! ॥ ಪಲ್ಲ ॥

೧

ಕವಿಮಿತ್ರರ ವರಪುತ್ರನ ಜನನ !
ಸವಿಯು ಇಂದಿನದು ಸಿಗಲಿ ದಿನ ದಿನ !

೨

ನೂರು ವರ್ಷಗಳು ಮಗುವಿಗೆ ಪೂರ್ತಿ !
ಮೇರೆವರಿಯಲೀ ಕಂದನ ಕೀರ್ತಿ !

೩

ಚೆಲ್ವಿಕೆ ತರಿಸಲಿ ಗೆಲವಿನ ಕಳೆಯಾ !
ಗೆಲ್ವಿಕೆ ಸುರಿಸಲಿ ಒಲವಿನ ಮಳೆಯಾ !

೪

ಪಿಡಿಯಲಿ ಆ ಕ್ಷತ್ರಿಯರಾ ಛಲವಾ !
ಪಡೆಯಲಿ ಶ್ರೀಸಿದ್ಧಾರ್ಥನ ಬಲವಾ !

೫

ಸಿದ್ಧಿಗೊಳಿಸಲೀ ಜೋಗುಳವಾ ಽ !
ಉದ್ಧರಿಸಲಿ ಕನ್ನಡ ಕುಲವಾ ಽ !

# ಆ ರಕ್ಷಿ ಈ ರಕ್ಷಿ

[ ಗೆಳೆಯ ರಾಮುವು ನಿರಾತೆಯ ನಿಮಿಷದಲ್ಲಿದ್ದಾಗ್ಗೆ ಆತನನ್ನು ಸಂತೈಸಲು ಆತನ ಒಳಿತಿಗಾಗಿ ಸಕಲ ದೇವತೆಗಳಲ್ಲಿ ಮೊರೆಹೋದ 'ರಕ್ಷಾ ಭಾವನೆ' ಇಲ್ಲಿ ಮುಖ್ಯ. ]

ಆ ರಕ್ಷಿ ಈ ರಕ್ಷಿ
ಶ್ರೀ ರಾಮುನಿಗೆ ರಕ್ಷಿ

ಆ ಕ್ಷೇಮ ಈ ಕ್ಷೇಮ
ಅಕ್ಷಯ ಕ್ಷೇಮ ಈ
ಪ್ರೇಮನಾಮಗೆ ಕ್ಷೇಮ
ಪ್ರೇಮಧಾಮಗೆ ಕ್ಷೇಮ
ಆ ರಕ್ಷಿ ಈ ರಕ್ಷಿ
ಶ್ರೀರಾಮುನಿಗೆ ರಕ್ಷಿ
ಪ್ರೇಮನಾಮಗೆ ರಕ್ಷಿ
ಪ್ರೇಮಧಾಮಗೆ ರಕ್ಷಿ
ನನ್ನ ರಾಮುಗೆ ರಕ್ಷಿ
ಅಣ್ಣ ರಾಮುಗೆ ರಕ್ಷಿ
ಕಣ್ಗೆ ಕಾಮನ ರಕ್ಷಿ
ಬೆನ್ಗೆ ಭೀಮನ ರಕ್ಷಿ
ಎದೆಗೆ ಬುದ್ಧನ ರಕ್ಷಿ
ತಲೆಗೆ ಸಿದ್ಧನ ರಕ್ಷಿ

ಸರ್ವಾಂಗಗಳಿಗೆ ಆ
ಸರ್ವೇಶ್ವರನ ರಕ್ಷಿ
ಅಣ್ಣ ರಾಮುಗೆ ರಕ್ಷಿ
ನನ್ನ ರಾಮುಗೆ ರಕ್ಷಿ
ಪ್ರೇಮಧಾಮುಗೆ ರಕ್ಷಿ
ಪ್ರೇಮನಾಮುಗೆ ರಕ್ಷಿ
ಶ್ರೀರಾಮುನಿಗೆ ರಕ್ಷಿ
ಆ ರಕ್ಷಿ ಈ ರಕ್ಷಿ
ಆ ಕ್ಷೇಮ ಈ ಕ್ಷೇಮ
ಅಕ್ಷಯ ಕ್ಷೇಮ ಈ
ಪ್ರೇಮಧಾಮುಗೆ ರಕ್ಷಿ
ಪ್ರೇಮನಾಮುಗೆ ರಕ್ಷಿ
ಆ ರಕ್ಷಿ ಈ ರಕ್ಷಿ
ಶ್ರೀರಾಮುನಿಗೆ ರಕ್ಷಿ

ಪ್ರೇಮದತ್ತಗೆ ಪ್ರೇಮ-
ದತ್ತನದೆ ರಕ್ಷಿ !!

# ಪ್ರೇಮಕೀರ್ತಿ ರಾಮಮೂರ್ತಿ

( ಸಂವಾದ )

[ ಗೆಳೆಯ ರಾಮುವಿನಂಥ ಗೆಳೆಯನು ಬೇರೊಬ್ಬನಿಲ್ಲವೆಂದೂ ಆತನೊಬ್ಬನಿದ್ದರೆ ಕಾಮಧೇನುವಿದ್ದಂತೆ ಎಂದೂ ಅಭಿಮಾನದಿಂದ ಅವನನ್ನು ಹಾಡಿ ಹರಸಲಾಗಿದೆ. ಪ್ರಶ್ನೋತ್ತರ ರೂಪವಲ್ಲಿದೆ. ]

ಹೇಳು ಬೇಗ—ಕೇಳು ಈಗ
ರಾಮನೇನು ?—ಕಾಮಧೇನು !

*　　　*

ಈತನಾರು ? —ಪ್ರೀತಿಪ್ಪೆರು !
ಎಂತು ಕೀರ್ತಿ ?—ಪ್ರೀತಿ-ಮೂರ್ತಿ ;
ರಾಸರಾಜ್ಯಚಕ್ರವರ್ತಿ ! —
ಏಕೆ ಈತ ?—ಪ್ರೀತಿಯೇಕೆ ?

*　　　*

ಈತನೆಂಥ ಪ್ರೀತಿಕಾಂತ ? —
ಎನ್ನ ಚೆನ್ನ ಚಂದ್ರಕಾಂತ !
ಓತುಸೋತು ಓಡಿಬಂದ
ಕಾವ ಜೀವ ನೋಡಿ ನಿಂದ
ಮದ್ವಿಕ್ಲಾಂತ ಹೃದ್ ವಿಶ್ರಾಂತ
‘ ಪೂತಭಾವರೀತಿಪ್ರಾಂತ
ಪ್ರಾಣಕಾಂತ ’ ಪದವಿಯಾಂತ
ಪ್ರೀತಿದತ್ತ ಪ್ರೀತಿಭ್ರಾಂತ !

*　　　*

ಪ್ರೀತಿ ಹೆತ್ತ ಪ್ರೀತಿಭ್ರಾಂತ
ರಾಮನೆಲ್ಲಿ ?- ಸೋಮನಲ್ಲಿ !
ಈತನೆಲ್ಲಿ ?—ಆತನಲ್ಲಿ !
ಆತನೆಲ್ಲಿ ?—ಈತನಲ್ಲಿ !

# ಏಕೆ ?

( ಇನ್ನೊಂದು ಸಂವಾದ )

[ ಗೆಳೆಯ ರಾಮುವು ಕಾರಣಾಂತರದಿಂದ ಬೇರೊಂದೂರಿಗೆ ಹೋಗಿರಲು ಅಗಲಿಕೆಯಿಂದ ಜೀವವೆಲ್ಲಾ ನಿಃಸತ್ತ್ವವಾದಾಗ ಹೃದಯದಲ್ಲಿಯೇ ಎರಡುದನಿಗಳು ಮಾತನಾಡಿಕೊಂಡ ರೀತಿಯನ್ನು ಇಲ್ಲಿ ಚಿತ್ರಿಸಲಾಗಿದೆ. ]

ಲೋಕದೊಳಗೆಲ್ಲರೂ ಸೌಖ್ಯದಿಂದಿರುತಿಹರು
ಮೂಕ ಜೀವವೆ ನಿನಗು ಸಕಲವೂ ಕುಶಲವೇ ?
ಏಕೆ ಸಖನೇ ಈ ತದೇಕಚಿತ್ತ್ರವು ಏಕೆ ?
ಏಕಾಕಿಯಾಗಿರುವೆಯಾ ?

* * *

ಶೋಕ-ಯೋಗಕ್ಷೇಮ ಕೇಳುವವರಾರವರು
ಏಕಾಂತದೊಳಗೆ ಇರುವವರಿ ಇಲ್ಲದ ಮೇಲೆ ?
ಏಕಾಕಿಯಾಗಿರುವೆಯಾ ಎಂಬ ಮಾತೇಕೆ ?
ಮಾತಿನಾ ಮೊನೆಯದೇಕೆ ?

---

# ಏಕೆ ಹೆದರಿಕೆ ?

[ ಸಖನಾದ ಪ್ರಭುವು ಒಮ್ಮೆಲೆ ಬಂದು ಬಿಡುವುದಿಲ್ಲ. ದಾರಿ ಕಾಯಿಸಿ ಕಾಯಿಸಿ ಹೃದಯ ಮಾಗಿದಾಗ ತಂತಾನೆ ಬರುವನು. ದಾರಿ ಕಾಯುತ್ತಿರುವ ಕಾಲದಲ್ಲಿ ನಮ್ಮಲ್ಲಿ ಉಕ್ಕಿ ಬರುವ ಪ್ರೀತಿ ಆತನಿಂದ ಉಕ್ಕಿ ಬರುವ ಪ್ರೀತಿಯೇ ಸರಿ. ಪ್ರೀತಿಸಿಕೊಳ್ಳುವ ಬಾಧ್ಯತೆ ಪ್ರಭುಜೀವಕ್ಕೆ ಮೀಸಲಿದ್ದರೆ ಪ್ರೀತಿಸುವ ಬಾಧ್ಯತೆ ಭಕ್ತಜೀವದ ಸೊತ್ತು. ಸಖ್ಯಭಕ್ತಿಯ ಈ ಅನುಭವವೇ ಪದ್ಯದ ಕೇಂದ್ರಕಲ್ಪನೆ. ]

೧

ಇಂದು ಬಾಗಿಲವರೆಗು ಇದಿಗೋ
ಬಂದ ಆ ದೊರೆ ಒಳಗೆ ಬರಲಿ-
ಲ್ಲೆಂದು ಹೃದಯವೆ ನಿನ್ನ ಮನದೊಳು
ಹೆದರಿ ಬೆದರುವೆಯಾ ?

೨

ಒಳಗೆ ಬಂದರೆ ಈಗ ತುಂಬುತ
ತುಳುಕುತಿಹ ಕಣ್ಣೀರಿನಿಂದಲಿ
ತೊಳೆಯುವನು ಇವ ತನ್ನ ಪಾದವ-
ನೆಂದು ತೆರಳಿದನೋ !

೩

ಪ್ರೀತಿಬಾಧ್ಯನೆ ಪ್ರೀತಿ ನಿನ್ನದೆ
ಪ್ರೀತಿಬಾಧ್ಯತೆ ನಿನ್ನದಾದರು
ಪ್ರೀತಿಸಾಕ್ಷಾತ್ಕಾರ-ಬಾಧ್ಯತೆ
ನನ್ನದೈ ದೊರೆಯೇ !

೪

ಹೃದಯವೇ ಇನ್ನಾದರೂ ನೀ
ಹೆದರಬೇಡೈ ಬೆದರಬೇಡೈ !
ಹೃದಯನಾಥನು ತಾನೆ ನಾಳೆಗೆ
ಕರೆಯದಲೆ ಬರುವ !

# ಬಿಡುವರೇ ಕೈಯ?

[ ದಿನಾಂಕ ೧೧-೭-೩೨ರ ಮಧ್ಯರಾತ್ರಿಯ ಸ್ವಪ್ನಮಧ್ಯವಲ್ಲಿ ಗೆಳೆಯರೆಲ್ಲರೂ ಕೈ ಬಿಟ್ಟಂತಾಯ್ತು. ಗೆಳೆಯ ರಾಮುವೂ ಕೈಬಿಟ್ಟ. ಆ ವಿರಹವಿಷಾದವನ್ನು ಕನಸಿನಲ್ಲಿಯೂ ತಾಳಲಾರದೆ ತಳಮಳದಲ್ಲಿ ಎಚ್ಚತ್ತಾಗ ಆ ಕಳವಳದಲ್ಲಿ ಒಡನುಡಿಯುತ್ತಲೇ ಎದ್ದ ಉದ್ಗಾರವೇ ಈ ಪದ್ಯ. ಕಣ್ಣೀರಿನ ಕೊರತೆಯ ಆ ದಿನಗಳಲ್ಲಿ ಮರಳಿ ಮರಳಿದ ಅಶ್ರುಜಲಧಾರೆ ಆ ದಾಹವನ್ನಾರಿಸಿತೋ ಏನೋ! ]

೧

ಇದು ಹೇಗೆ ಬಂದಿತ್ತೈ ಈ ಹೊಸ ವಿಷಾದ —
ಇದೆಯೆಂದು ತಿಳಿದಿರಲು ಗೆಳೆಯನ ಪ್ರಸಾದ ?

೨

ಮಿತ್ರಭಾವೋದ್ರೇಕತಾಪವೇಕೆ ?
ಅಶ್ರುಜಲಧಾರಾಪ್ರಪಾತವೇಕೆ ?

೩

ತಿಳಿದೊ ತಿಳಿಯದೆಯೊ ಏನಾಯಿತೋ ಜೀಯಾ !
ಗೆಳೆಯ ! ಗೆಳೆಯರ ಗೆಳೆಯ ! ಬಿಡುವರೇ ಕೈಯಾ ?

೪

ಜನ್ಮಾಂತರದ ಪುಣ್ಯ ತಾನಿದ್ದರಹುದು !
ಮನ್ನೀಷೆಯು ಒಂದು ದಿನ ಫಲಿಸಬಹುದು !

೫

ನಾಚಿಕೆಯ ತೋರದಂಗಲಾಚುವೆನು ಸದಯಾ !
ಯಾಚಿಸುವೆ ನೀಡಯ್ಯ ಯೋಚಿಸದೆ ಅಭಯಾ !

# ಅಭಯ-ಯೋಗ

['ಬಿಡುವರೇ ಕೈಯ' ಎಂದು ಹೃದಯವು ಅಲ್ಪರಿಂದು ಆರ್ತಸ್ವರದಿಂದ ಕೂಗಿದಾಗ ಆ ಗೆಳೆಯರ ಗೆಳೆಯ ಓಗೊಟ್ಟು ಓಡಿಬರುವನು. ಸಖರಲ್ಲಿ ಸಖ್ಯ ಸಿದ್ಧಿಸುವ ಮುನ್ನ ಭಯದ ಭಾವ ಅಳಿದು ಅಭಯವು ಬೆಳೆದು ಬರುವದೆಂಬ ಅನುಭೂತಿಯೇ ಈ ಉದಯರಾಗದ ಜೀವಾಳ. ]

೧

ಬಂದನು ಅಗೊ ಹೃನ್-
ಮಂದಿರದಲಿ ಇಗೊ
ನಿಂದನು ನನ್ನಯ ರಾಮಾ
ಇನ್ನು
ಎಂದಿಗು ಜನುಮಕೆ ಕ್ಷೇಮಾ !

೨

ಮನವೇ ಗರ್ಜಿಸು
ತನುವೇ ಗರ್ಜಿಸು
ಸ್ನೇಹಸಿಂಧುವಿನ ನಾಮಾ
ನನ್ನಾ
ಧರ್ಮಬಂಧುವಿನ ನಾಮಾ !

೩

ಎನಿತು ಮಧುರವೋ
ಇನಿಯನ ನಾಮಾ !
ರಾಮಚಂದಿರನ ನಾಮಾ
ಘನ್ನಾ
ಪ್ರೇಮಸುಂದರನ ನಾಮಾ !

೪

ಕೂಡಿದೆನೀಗಲೆ
ಹಾಡುವೆನೀಗಲೆ
ಉಳುಹಿತು ಸಲುಹಿತು ಇಂದೇ !
ಚೆನ್ನಾ
ಶ್ರೀರಾಮನಾಮವೊಂದೇ !

೫

ದೊರೆಯಿಂದಭಯವು
ದೊರೆಯಿತು ಇಂದೇ !
ಉದಯದ ಈ ರಾಗವನು
ಹಾಡುವೆ
ಅಭಯದ ಈ ಯೋಗವನು !

# ಪ್ರೇಮ ದತ್ತಾತ್ರೇಯನಿಗೆ (೧)

[ ನನ್ನ ಜೀವನದಲ್ಲಿ ವಿಶಿಷ್ಟಸ್ಥಾನವನ್ನು ಪಡೆದ ಪೂರ್ವದ ಗೆಳೆಯರಾದ ರಾಮ-ರಂಗ ವಿನಾಯಕರೆಂಬ 'ಮಿತ್ರತ್ರಯ' ವನ್ನು ಪ್ರೇಮದತ್ತಾತ್ರೇಯನೆಂದು ಕರೆದು ಈ ೩ ಪದ್ಯಗಳನ್ನು ಬರೆಯಲಾಗಿದೆ. ]

೧

ಹೆಜ್ಜೆ ಹೆಜ್ಜೆಗೆ ರಾಮ
ಗರ್ಜಿಸುವೆ ಶ್ರೀರಾಮ
ಮಜ್ಜೀವನದ ಪ್ರೇಮ-
ಕಜ್ಜಾಯವಿದು ರಾಮ
ಗರ್ಜಿಸುವೆ ಶ್ರೀರಾಮ !

*　　*

ಜಗವಾಗ ಹಗೆಯಾಗೆ
ಇಗೊ ನಿನ್ನ ಗೆಳೆಯನೆಂ-
ಮಗುವ ಆ ನಗೆಯೊಡನೆ
　ಹೊಳೆಯಲಾ ಮಗುವು
　ಹೊಳೆಯಲಾ ಮಗುವು
ಆ ಮಗುವು ನೀನೆಂದು
ರಾಮಚಂದಿರನೆಂದು
ಪ್ರೇಮಸುಂದರನೆಂದು
　ತಿಳಿಯಲೀ ಜಗವು
　ತಿಳಿಯಲೀ ಜಗವು !

ಉಕ್ಕುತಿಹ ಸಾಗರನು
ನೀನೆ ಕಾಣಯ್ಯ ಮತ್-
　ಪ್ರೇಮ ಸಾಗರನೆ
　ಪ್ರೇಮಸಾಗರನೆ
ಉಕ್ಕಿಸುವ ಚಂದಿರನು
ನೀನೆ ಕಾನಯ್ಯ ಚಿತ್-
　ರಾಮಚಂದಿರನೆ
　ರಾಮಚಂದಿರನೆ !

೨

ನನ್ನಂತರಂಗದ-
ಲ್ಲಂಗಾಂಗದೊಳ್ ರಂಗ
ನಿನ್ನಂತರಂಗಾಂಗ-
　ಸಂಗವುಂಟು
　ಸಂಗವುಂಟು
ನನ್ನ ಈ ಬಿನ್ನಪವ
ಅವಧಾರಿಸೈ ಅರಸೆ
ನಿನ್ನದೇ ಸಂಗಾಂಗ-
　ರಂಗವುಂಟು
• ರಂಗ ! ಉಂಟು !

೩

ಪ್ರಲ್ಹಾದ ! ಅವನಾ ದಾರಿಯೆಲ್ಲಿ ?
ಆಲ್ಹಾದ-ಜೀವದಾಧಾರಿಯೆಲ್ಲಿ ?
ಪಲ್ಲನೀ ಜೀವದಾ ದಾಸಿಯಲ್ಲಿ
ಇಲ್ಲ ಕೊನೆಮೊದಲು ಹೃತ್-ಶ್ರೇಣಿಯಲ್ಲಿ !

# ಪ್ರೇಮದತ್ತಾತ್ರೇಯನಿಗೆ. (೨)

೧

ನೆನೆಯಲಾಗಿ ನಿಮಿ-
ಷಾರ್ಧದಲ್ಲಿ ಅನಿ-
ಮಿಷರ ಮೀರಿ ನೆಗೆ-
ಯುತ್ತ ಬಂದು ಈ
ಜೀವನಕ್ಕೆ ಜೀ-
ವನವನೆರೆದು ಸಂ-
ತೈಸುವಂಥ ಪಿ-
ತಾಂತವೇಕ ಮಾ-
ತ್ರಾಧಿಕಾರಿ ಪ್ರೇ-
ಮಾವತಾರಿ ಮಮ
ಪ್ರಾಣದಾನಿ ಸಂ-
ಜೀವ ವರದ ಶ್ರೀ
ರಾಮಚಂದ್ರನಿಗೆ
ಓಂ ನಮೋ ನಮೋ !

೨

ತಪಕದಿಂದ ಲವ-
ಲವಿಕೆಯೊಡನೆ ತಿಳಿ-
ವಳಿಕೆಯಿತ್ತು ತಿಳಿ
ತಿಳಿಸಿ ಹೇಳಿ ಅತಿ
ಹಿತದ ಸ್ಮಿತದ ಸವಿ
ಮಾತಿನಿಂದ ರಮಿ-
ರಮಿಸಿ ಸೋಲಿ ತಾ-
ನಪ್ಪಿ ಒಪ್ಪಿಸುವ
ಅಂತರಂಗದಧಿ-
ನಾಥ ನೂತ್ನ ಚೈ-
ತನ್ಯಚಾರಿ ಮಮ
ಚಿತ್ತಚೋರ ಶ್ರೀ
ರಂಗನಾಥನಿಗೆ
ಓಂ ನಮೋ ನಮೋ !

೩

ಇತ್ತ ಇತ್ತ ಒಂ-
ದೊಂದು ಮುತ್ತಿ ನೊಳ-
ನಾಡನಾಳುತಿಹ
ಚಿನ್ಮಯಾನಂದ-
ದಂತರಾಳದ ವಿ-
ಶಾಲ ವೈಭವ ವಿ-
ಕಾಸ ಶೀಲ ಸುಂ-
ದರ ಗಭೀರ ಗಂ-
ಭೀರ ಧೀರ ಚಾ-
ರಿತ್ರ್ಯ ಶಾಲಿ ಸೌಂ-
ದರ್ಯ ಧರ್ಮವಿದ
ಮಮ ಮನೋಹರಗೆ
ಶ್ರೀವಿನಾಯಕಗೆ
ಓಂ ನಮೋ ನಮೋ !

# ಗೆಳೆಯ ವಿನಾಯಕನಿಗೆ

[ ಶಕೆ ೧೮೫೪ ಗೋಕುಲಾಷ್ಟಮಿಗೆ ಸಂದ ಗೆಳೆಯ ವಿನಾಯಕನ ಹುಟ್ಟಿದ ದಿನಕ್ಕಾಗಿ ಬರೆದುದು. ]

೧

ಗೆಳೆಯರ ಗೆಳೆಯಾ
ಬೆಳಗುತ ಬಂದಾ
ಹಿಗ್ಗಿನ ಬೆಳೆಯಾ
ಸುಗ್ಗಿಯ ತಂದಾ
ಇಳೆಯೊಳಗಿನ ಎಳೆ
ಗೆಳೆಯರೆಲ್ಲರೂ
ಕೊಯ್ಯೆ ಬನ್ನಿರಿ
ಒಯ್ಯೆ ಬನ್ನಿರಿ !

೨

ಗುರುಹಿರಿಯರ ಆ
ವರಪ್ರಸಾದವ
ತಿರೆಯಲಿ ತೂಗಲು
ತ್ವರೆಯಲಿ ಬಂದಾ
ಇಳೆಯೊಳಗಿನ ಎಳೆ
ಗೆಳೆಯರೆಲ್ಲರೂ
ಹಿಡಿಯ ಬನ್ನಿರಿ
ಪಡೆಯ ಬನ್ನಿರಿ !

೩

ಚೆಲುವಿನ ದರ್ಶನ-
ಬಲದಲಿ ಬೆಳೆದಿಹ
ಚೆನ್ನಿಗ ಬಂದಾ
ನನ್ನಿಗ ಬಂದಾ
ಇಳೆಯೊಳಗಿನ ಎಳೆ
ಗೆಳೆಯರೆಲ್ಲರೂ
ನೋಡ ಬನ್ನಿರಿ
ಕೂಡ ಬನ್ನಿರಿ !

೪

ಒಲವು ನೆರೆಯಿತು
ತಿಳಿವು ಬೆರೆಯಿತು
ಒಲವಿನ ತಿಳಿವಿನ
ಗೆಳೆತನವಾಯಿತು
ಇಳೆಯೊಳಗಿನ ಎಳೆ
ಗೆಳೆಯರೆಲ್ಲರೂ
ತಿಳಿಯ ಬನ್ನಿರಿ
ನಲಿಯ ಬನ್ನಿರಿ !

೫

‘ ಒಲವೇ ಚೆಲುವು
ಚೆಲುವೇ ನಲಿವು
ನಲಿವೇ ತಿಳಿವು
ತಿಳಿವೇ ಬಲವು ’
ಎನ್ನುವ ಎಳೆಯಾ
ನನ್ನಯ ಗೆಳೆಯಾ
ಪ್ರೀತಿಯೊಳಿತ್ತಿಹನುಂಗುರವಾ !
ಇನ್ನು —
ಏತಕೆ ತಡ ಹೊಯ್ ಡಂಗುರವ !

# ಗೆಳೆಯ ಲಕ್ಷ್ಮಣನಿಗೆ

[ ದಿನಾಂಕ ೧೧-೮-೪೫ ಕ್ಕೆ ಗೆಳೆಯ ಲಕ್ಷ್ಮಣನಿಗೆ ಬರೆದ ಒಂದು ಪತ್ರವಿದು. ಅವನ ನಿರಾಶೆಯ ನಿಮಿಷದಲ್ಲಿ ಉತ್ಸಾಹವನ್ನೀಯಲು ಬರೆದ ಉದ್ಗಾರಗಳು ಇಲ್ಲಿವೆ. ಆತನು ನಂಬಿದ ಕುಲದೇವತೆ ಕೊಲ್ಹಾಪುರದ ಜಗದಂಬೆ ಅವನನ್ನು ರಕ್ಷಿಸಲೆಂದು ಪ್ರಾರ್ಥಿಸಿದೆ. ]

೧

‘ ಜಯ ಜಗದಂಬೆ
ಭಯವಿಲ್ಲೆಂಬೆ
ಹಂಬಲ ತುಂಬೆ
ನಂಬಿದೆನಂಬೆ
ಅನ್ಯರ ನಂಬೆ ’
ಎಂದೆನ್ನುವ ಹಸುಳಾ ಬಾಲಾ !
ಇಂದೇ ಕುಡಿ ತಾಯಿಯ ಹಾಲ!

೨

ತಾಯಿಯಾಗಿ ತಾ
ಕಾಯಲಿ ! ಮಗು ತನ್ನಾ !
ಅಕ್ಕನಾಗಿ ಬಲು
ಅಕ್ಕರಿಸಲಿ ! ಚಿನ್ನಾ !
ತಂಗಿಯಾಗಿ ನೆರೆ
ತಂಗಿಸಲ್ಕೆ ನಿನ್ನಾ !
ಗೆಳತಿಯಾಗಿ ಗಡ
ನಲಿನಲಿಸಲಿ ಚೆನ್ನಾ !
ಮಗಳು ಆಗಿ ಎದೆ-
ಮುಗುಳಾಗಲಿ ಘನ್ನಾ !

೩

ಇಳೆಯನೆಲ್ಲವನು
ಸಲುಹುವ ನಗಿಸುವ
ಜಗದಂಬೆಯು ಮಗು
ನಗು ನಗು ನಗು ನಗು
ಸಲ್ಲದು ಅಳುವುದು
ಅಲ್ಲದು ಬಿರುದದು
ನಗು ನಗು ನನ್ನಯ ನಕ್ಷತ್ರಾ !
ಮಗುವೇ ಇದು ಧರ್ಮವು ಶಾಸ್ತ್ರಾ !

---

# ಗೆಳೆಯರೆಲ್ಲರಿಗೆ

[ ಗುಂಪಿನ ನಿರಾಶಾಮಯ ವಾತಾವರಣದಲ್ಲಿ ೧೯೩೧ ರಲ್ಲಿ ಬರೆದುದು. ]

೧

ಉಮ್ಮಳಿಸಿದೆ ಮಗು! ಕಾಯುವ ತಾಯಿಯ
ಕೈಯ ನೀಡುವಿರಾ
ನನ್ನಯ
ರಯ್ಯ ಗೆಳೆಯರಿರಾ!

೨

ಇಮ್ಮಡಿ ಮುಮ್ಮಡಿ ನಾಲ್ಮಡಿ ನೂರ್ಮಡಿ
ತಳಮಳಗೊಳುತಿಹುದು
ಈ ಮಗು
ಕಳವಳಗೊಳುತಿಹುದು!

೩

ಸುಮ್ಮಯ ನೆಮ್ಮದಿ-ಮಡಿಲಲಿ ಮಡಗಿಸಿ
ಮಲಗಿಸಿಕೊಳ್ಳುವುದು
ಗೆಳೆಯರೆ
ತೊಲಗಿಸಿ ತಳ್ಳುವುದೆ?

೪

ಸುಮ್ಮನೆ ಮಲಗುವ ಮಗುವಿಗೆ ಸಲೆ ಸೋ-
ಬಾನವ ಹಾಡುವಿರಾ?
ಬಲು ಸು-
ಮ್ಮಾನವ ನೀಡುವಿರಾ?

ಗೆಳೆಯರೆಲ್ಲರಿಗೆ

೫

ರಮಿಸಿ ರಂಬಿಸುವೊಲವಿನ ಸಿಲುವನು
ನೀನೇ ಅರಿತವರು
ಸುಹೃದರೆ
ತಾನೇ ಸುರಿತವರು !

೬

ಹೇಳುವುದೇನಿದೆ ? ಕೇಳುವುದೇನಿದೆ ?
ಕೂಡಿದೆ ನಿಮ್ಮನ್ನೇ
ಎಲ್ಲಾ
ಕೂಡಿದೆ ತಮ್ಮನ್ನೇ !

---

# ಬಿಡುಗಡೆ

[ 'ವಿರಸ ಮರಣ'ವೆಂಬಂತೆ ಗೆಳೆಯರಲ್ಲಿ ವಿರಸವುಂಟಾಗಿ ೧೯೩೧-೩೨ ರ ಚಳಿಗಾಲದಲ್ಲಿ ಜಯಕರ್ನಾಟಕ ಪತ್ರಿಕೆಗೂ ಗೆಳೆಯರ ಗಂಪಿಗೂ ಸಂಬಂಧ ತಪ್ಪಿ ಹೋಯಿತು. ಗೆಳೆಯರೆಲ್ಲಾ ಚೆದರಿದರು. ಜಯಕರ್ನಾಟಕ ಸಂಸ್ಥೆಯೊಂದರಿಂದ ಅನೇಕ ಇತರ ಸಂಸ್ಥೆಗಳು ತಲೆಯೆತ್ತಿದವು. ಮಾನಧನ ಗುರುಗಳಾದ ಶ್ರೀ ಬೇಂದ್ರೆಯವರು ದೇಶಾಂತರದಲ್ಲಿ ಪುಣೆಯಲ್ಲಿ ಇರಬೇಕಾಯಿತು. ಇಂಥ ಕಾಲಕ್ಕೆ ನಾನು ಆ ಸಂಸ್ಥೆಯಿಂದ ಬಿಡುಗಡೆ ಹೊಂದಿದಾಗ ಬಂದ ಉದ್ಗಾರಗಳು ಇಲ್ಲಿವೆ. ]

೧

ಯಾವ ಹೂವ ಕರುಳ ಕಂಡರವುಮ ಮಧುವೆ ನಷ್ಟವು !
ಜೀವಭೃಂಗ ಬಳಸಿ ಬಳಲಿ ಭ್ರಮಿಸುತಿದೆ ಭ್ರಮಿಷ್ಟವು !

೨

ಹೂವ ತರುವ ಜೀವ ಹುಲ್ಲ ಹೊರುವ ಒಳ್ಳೆ ಹೊತ್ತಿದು !
ದೇವನೆಂಬ ಕಾವ ಪುರುಷ ಕೊಟ್ಟ ವಿಷದ ತುತ್ತಿದು !

೩

ಹಾಯಿಯಿತ್ತ ನಂಜ ನುಂಗಿ ಬದುಕಿದವನ ಹೆಸರನು
ಬಾಯಿಯಿಂದ ಉಸಿರುವವನೆ ಕುಡಿ ಈ ಕಹಿ ಎಸರನು !

೪

ನನ್ನ ನಿನ್ನ ಮಾನಧನ-ಗುರುವಿಗು ದೇಶಭ್ರಷ್ಟತೆ !
ಇನ್ನೊರೆವುದೆ ? ನನ್ನ ಸ್ಥಾನಭ್ರಷ್ಟತೆಗು ಕನಿಷ್ಠತೆ !

೫

ಪುಣ್ಯದ ಪರ್ಜನ್ಯದಿಂದ ಪಾಪಕುಂಭ ತುಂಬಿತು !
ಗಣ್ಯನಲಾ ಪುಣ್ಯಶಾಲಿ!- ಪಾಪ ಪಾಪಿ ನಂಬಿತು !

೬

ಪಾಪಕುಂಭ ತುಂಬಿ ತುಳುಕೆ ಪುಣ್ಯ ಹೊರಗೆ ಹರಿಯಿತು !
ಶಾಪ ಬೇಕೆ ? ಕೋಪವೇಕೆ ? ತಾಪದ ಬಗೆ ಹರಿಯಿತು !

# ಬಿಡುಗಡೆಯ ಬಳಿಕ

[ ಸ್ವತಂತ್ರವಾಗಿ ಒಂದು ಸಂಸ್ಥೆಯನ್ನು ಕಟ್ಟುವ ಕನಸು ಮಾಯವಾಗಿ-ಇನ್ನೊಂದು ಸಂಸ್ಥೆಯಲ್ಲಿ ಆಳಾಗಿ ದುಡಿಯುವ ಪ್ರಸಂಗವುಂಟಾದ ಕಾಲಕ್ಕೆ ೨೭ ನೆಯ ಜನ್ಮದಿನ ಒದಗಲಾಗಿ ಜೀವನವನ್ನು ಸಿಂಹಾವಲೋಕನದಿಂದ ಕಂಡ ಉದ್ಗಾರಗಳು ಇಲ್ಲಿ ಒಡಮೂಡಿವೆ. ]

ಇಂದಿಗಿಪ್ಪತ್ತೇಳು ವರುಷಗಳ ಹಿಂದೆ
ಬಂದಿತೀ ಜಗದೊಳಗೆ ಮಗುವು ತಾನೊಂದೆ

ಬರುವಾಗ ಬಾಯಲ್ಲಿ ಬೆಳ್ಳಿಬೆಳಕು !
ಇರುವಾಗ ಎಲ್ಲಿರುವದೇನೊ ಆ ಥಳಕು !

ಮಗುವು ಹುಟ್ಟಲು ಮೂರು ಹಳ್ಳಿಗಳಿಗೆಲ್ಲಾ
ನಗೆಯ ಸಕ್ಕರೆ ಚೆಲ್ಲಿ ಚೆಲ್ವರಿಯಿತಲ್ಲಾ !

ಬೆಳಕು ಚಂದ್ರಗೆ ಮೂರು ಮುಕ್ಕಾಲು ಗಳಿಗೆ
ಬಳಿಕ ಕಗ್ಗತ್ತಲೆಯು ತಾ ಬಹುದು ಬಳಿಗೆ !

ಜನ್ಮವರ್ಷವು ಅಥ ಶ್ರೀಪರಾಭವವು
ಜನ್ಮಾಂತರದ ಇತಿ ಶ್ರೀಸುವೈಭವವು !

* * *

ಅಮ್ಮಯ್ಯ ಅನಬೇಕು ಅಡಿಗು ಅಡಿಗೂ
ದಮ್ಮಯ್ಯ ಎನಬೇಕು ನುಡಿಗು ನುಡಿಗೂ !

ಹೊರಬೇಕು ಹೊರಬಾರದಂಥ ಅಪವಾದ
ಇರಬೇಕು - ಯಾರಿಚ್ಛೆ? ಬಂದ ಅಪರಾಧ !

ರಾಜರಾಜರ ಸತಿಯೆ ಮಾನಗೆಟ್ಟಿರಲು
ಸೋಜಿಗವೆ ನಿನಗೆ ಅವಮಾನ ತಟ್ಟಿರಲು ?

ಸಹಿಸುವುದು ಸಹಿಸುವುದು ಆಹವು ರಾತ್ರ!
ಇಹಕು ಪರಕೂ ಇದುವೆ ಏಕಸೂತ್ರ !

ನರವೀರ ಮಾಡುವದು ನರಗುರಿಯ ಕಾರ್ಯ
ಗುರಿಯಿರದ ಹೊರೆಯಾಯ್ತು ಬಾಳ ತಾತ್ಪರ್ಯ !

*　　　*　　　*

ಹಾಲಿನಲಿ ನೀರ್ ಬೆರೆಯೆ ಕ್ಷೀರಾಮೃತಾ !
ಪಾಲಿನಲಿ ಬಂದುದೇ ಪಂಚಾಮೃತಾ !

ಸಕಲವೂ ಕಲುಷಿತವು ರಾಮಭದ್ರಾ !
ಅಕಲಂಕ ನೀನೊಬ್ಬ ರಾಮಭದ್ರಾ !

ನಿನ್ನಾಜ್ಞೆ ನಿನ್ನಾಜ್ಞೆ ರಾಮಚಂದ್ರಾ !
ನಿನ್ನನುಗ್ರಹವಿರಲಿ ರಾಮಚಂದ್ರಾ !

ಎಂದಿಗಹುದೋ ದಯೆಯು ನೀನೆ ತರಲು !
ತಂದಿಟ್ಟವನೆ ನೀನೆ ಬಲ್ಲೆ ಬರಲು !

ಹರುಷವೇ ! ಶ್ರೀಹರಿಯೆ ! ಸರ್ವೋತ್ತಮಾ !
ಪುರುಷಾರ್ಥ ಸಿದ್ಧಿಸಲಿ ಪುರುಷೋತ್ತಮಾ !

———

# ಪ್ರೀತಿಗೆ

[ ಶಕೆ ೧೮೫೩ ರ ಗಣೇಶಚತುರ್ಥಿಯ ದಿನ 'ಪ್ರೀತಿ' ಎಂಬ ವಿಷಯವನ್ನಾಯ್ದುಕೊಂಡು ಹಲವರು ಗೆಳೆಯರು ಕೂಡಿ ನಡೆಯಿಸಿದ 'ಕಾವ್ಯಶಾಸ್ತ್ರ ವಿನೋದದ ಸ್ಪರ್ಧೆ'ಯಲ್ಲಿ ಉದಿಸಿದ ಉದ್ಗಾರಗಳಿವು. ಜೀವನಕ್ಕೆ ಜೊತೆಗಾತಿ ಬೇಕೆಂಬ ಹಂಬಲ ಇಲ್ಲಿ ಚಿತ್ರಿತವಾಗಿದೆ. ]

ಪ್ರೀತಿಯೆ ಬಾರೇ ದೂತಿಯೆ ಬಾರೇ
'ಪ್ರೀತಿಯ ದೂತಿ'ಯು ಜ್ಯೋತಿಯು ತಾರೆ
ಬಾರೇ ಬಾರೇ ತೋರೇ ತೋರೇ
ಜೀವದ ಗೆಳತಿಯು ಪ್ರೀತಿಯ ಧಾರೆ !

ಈ ಹೃದಯದ ಆಲ್ಹಾದಿನಿಯೆಲ್ಲಿ ?
ಈ ಜೀವನ-ಸಂಜೀವಿನಿಯೆಲ್ಲಿ ?
ನನ್ನಾ ಗೆಳತಿಯು ಬಳಿಯಿಂದಲಿ ಬರು
ಗಾಳಿಯೆ ಬಾ ತಂಗಾಳಿಯೆ ಬಾರೆ !

ಪ್ರೇಮಪವಿತ್ರೆಯು ಹೃದಯಸುಮಿತ್ರೆಯು
ಇರುವಳೆ ಎಲ್ಲಿರುವಳು ಹೇಗೇನೆ ?
ಇದ್ದರೆ ಬರುವಳೆ ಬಂದರೆ ಇರುವಳೆ
ನನ್ನ ಸುಮಿತ್ರೆಯು ಆಗಿಯೆ ತಾನೆ ?

ಆಕೆಯು ಬಂದರೆ ಬಾಳುವೆಗೊಳಿತು !
ಬೆಳೆವುದು ನಲುಮೆಯ ಬಳ್ಳಿಯು ಬಲಿತು !

# ಉತ್ಸುಕತೆ

[ಮದುವೆ ಅವಶ್ಯವೆಂಬ ನಿರ್ಣಯಕ್ಕೆ ಬಂದಾಗ ಬರೆದ ಪ್ರೀತಿಗೀತ]

ಜೀವದ ಗೆಳತಿಯರೆ ಗುಟ್ಟಿನ ಮಾತೊಂದ ಕೇಳುವೆ
ಪಡಿನುಡಿ ಪೇಳುವಿರಾ ? ||ಪಲ್ಲ||

ಜೀವಕಾಂತನು ಯಾವ ಏಕಾಂತದೊಳಗೆ ತಾ
ಪವಡಿಪನೆಂಬುದನರುಹುವಿರಾ ?
ಎಂದು ಬಂದೀ ಕೈಯ ಪಿಡಿವನೆಂಬುದನಾರು
ಬಲ್ಲಿರಿ ದಯವಿಟ್ಟು ಉಸಿರುವಿರಾ ? ||೧||

ಪತಿದೇವರಾಯನ ಜೊತೆಗೆ ಬಾಳುವೆ ಮಾಳ್ಪ
ಅತಿ ಸಂಭ್ರಮವುಳ್ಳ ನೀರೆಗೆ
ಹೃದಯಮಂಗಲ ಸೂತ್ರಧಾರಿಯೆ ಇರದಿರೆ
ಧಾರೆಯನೆರೆವುದು ಯಾರಿಗೆ ? ||೨||

ಆರ್ಯವಂಕುಲಕೆ ಸಂಮತವಾಗಿ ತೋರುವ ಬ್ರಾಹ್ಮವಿವಾಹಕೆ
ಬದ್ಧಳಃ ಇರುವೆ !
ದೇವಕೋಟಿಪ್ರಿಯವಾದ ಗಾಂಧರ್ವವಿವಾಹವಾದರು ಸಂ
ಸಿದ್ಧಳೆ ಇರುವೆ ! ||೩||

ಯಾವ ವಿವಾಹದಿ ಜೀವಮೋಹನ ಬಂದು
ಕೈಪಿಡಿಯಲೆಂದು ಈ ಜೀವವು ಆರ್ತ !
ಜೀವಪ್ರವಾಹವು ಸ್ನೇಹಸಾಗರನಲ್ಲಿ
ಬೆರೆತ ಮುಹೂರ್ತವೆ ಮುಹೂರ್ತ ! ||೪||

ಆರ್ಯಪುತ್ರನ ಪಾದಸೇವೆಯ ಸೌಭಾಗ್ಯ
ಎಂದಿಗೀ ಜೀವಕ್ಕೆ ದೊರೆಯುವದು ?
ಕಾರ್ಯವಾವುದು ಸಖಿ ಆರ್ಯನೆ ಬರದಿರೆ
ಕೊರಕೊರಗಿ ಜೀವವ ತೊರೆಯುವುದು ! ||೫||

# ದಾರಿದೀವಿಗೆ

[ ನನ್ನ ಜೀವನದ 'ಪಾಣಿಗ್ರಹಣ ಮಹೋತ್ಸವ' (೨೪-೧೨-೧೯೪೨) ದ ಕಾಲಕ್ಕೆ ಉಂಟಾದ ಅನುಭವವು ಇಲ್ಲಿ ಮೂಡಿಬಂದಿದೆ. ಕೈಹಿಡಿದ ಸತಿಯ ಒಲುಮೆ ಬಾಳ ದಾರಿ-ದೀವಿಗೆಯಾಗಲು ದೇವರ ದಯೆಯೆ ಕಾರಣವೆಂಬುದೇ ಮುಖ್ಯ ಕಲ್ಪನೆ. ]

ನನ್ನ ನರಸುತೊಬ್ಬ ಜಾಣೆಯೆದುರು ಬಂದಳು
ತನ್ನದೊಂದು ಪ್ರೇಮಸಂದೇಶ ತಂದಳು !

ದೊರೆಯ ದಯೆಯ ಕೈಯು ನನ್ನ ಕೈಯ ಬೆರಳಲಿ
ಬೆರೆತ ಗುರುತ ಕಂಡು ಹೃದಯಕುಸುಮವರಳಲಿ !

ಈ ಕುಸುಮವಿದರ್ಪಿತವಿದೆ ಯಾವ ದೇವಿಗೆ
ಆಕೆಯೊಲುಮೆ ನನ್ನ ಬಾಳ ದಾರಿ-ದೀವಿಗೆ !

---

# ಮದುಮಗ ರಾಮುವಿಗೆ

[ ದಿನಾಂಕ ೧೦–೬–೪೩ಕ್ಕೆ ಸಂಪ ಗೆಳೆಯ ರಾಮುವಿನ ವಿವಾಹೋತ್ಸವದ ದಿನ ಆತನ ಮದುವೆಯ ಕಾಣಿಕೆಯಾಗಿ ಅರ್ಪಿಸಿದ ಪದ್ಯ ]

ಕೊಡುಗೈಯ ದೊರೆ ನಮ್ಮ ರಾಮುಚಂದ್ರ !
ಕಡೆವರೆಗು ಕೈಪಿಡಿವ ಪ್ರೇಮಸಾಂದ್ರ !

ಎಷ್ಟೊಂದು ಜೀವಿಗಳಿಗಿತ್ತನೋ ಮೋದ !
ಮತ್ತೊಂದು ಜೀವಲತೆಗಿಂದಾಸರಾದ !

ಎಂಥ ಧೀರೋದಾತ್ತ ಸ್ನೇಹಶೀಲ !
ಇಂಥವನಿಗೆಂದಿಗೂ ದೇವನನುಕೂಲ !

ಇಂಗಡಲ ಚಂದಿರಗೆ ಇಂದೇಕೆ ಜ್ಯೋಕೆ ?
ಮಂಗಲಾತ್ಮಗೆ ಬೇರೆ ಮಂಗಲವು ಬೇಕೇ ?

# ನನಸೇ !

[ ದಿ. ೧೪–೭–೨೨ ಕ್ಕೆ ಬರೆದ ಪದ್ಯವಿದು. ಆಗ ಮಹಾತ್ಮರು ‘ ಸತ್ಯವೇ ದೇವ’ ನೆಂದು ಭಾರತಕ್ಕೆ ಉಪದೇಶಿಸುತ್ತಿದ್ದರು. ಬಾಳುವೆಯ ಹರಿಯದ ಹೊಸ್ತಿಲಲ್ಲಿ ಆದೇ ಕಾಲಿಟ್ಟ ಜೀವವು ‘ ಇದು ಹೇಗೆ ? ಮಹಾತ್ಮರ ಅನುಭವವು ನನಗೆಂದು ಬಂದೀತು ? ’ ಎಂದು ತಪಿಸಿ ತೆಗೆದ ಉದ್ಗಾರಗಳು ಇಲ್ಲಿವೆ. ]

೧

ಇಳೆಯ ನೆಲದಲ್ಲಿ ಮುಗಿಲೆಂತ ಮುಗಿಲಲ್ಲಿ ಸುಳಿ-
ದಾಡುತಿಹ ಗಾಳಿಯಲ್ಲಿ
ನಲಿನಲಿವ ಕಡಲಲ್ಲಿ ನೀನಿದ್ದು ಹಿಗ್ಗುತ್ತ
ಊದುತಿಹೆ ಕಾಳಿಯಲ್ಲಿ !

೨

ಹಿಂದಿದ್ದಿ ! ಇಂದಿದ್ದು ಮುಂದೆಯೂ ಇದ್ದರೂ
ನನಸೆ ನೀನೆನಗೆ ಕಾಣೆ !
ಹಿಂದು ಮುಂದಿಂದುಗಳನಿನ್ನುಳಿದು ಎಂದೆಂದೊ
ಕಾಂಬುದೆಂಬುದನು ಕಾಣೆ !

೩

ಜಗವು ನಿನ್ನಲ್ಲೆ ನಡೆಯುತ್ತ ಸಾಗಿದಲಾಗಿ
ಆದರ ಬಗೆ ಹರಿಯಲಿಲ್ಲ !
ನಗೆಯ ನನೆ ನಿನ್ನಿಂದೆ ಹೂವಾಗೆ ವಾಸನೆಯು
ನನ್ನೊಳಗೆ ಹರಿಯಲಿಲ್ಲ !

---

# ಓಂಕಾರಕ್ಕೆ ನಮಸ್ಕಾರ

[ ಗೆಳೆತನದ ಸಿದ್ಧಿಗಾಗಿ ನಡೆಯಿಸಿದ ಒಂದು ಸಾಧನದ ಪ್ರಯೋಗದ ಅವಧಿಯಲ್ಲಿ ಪ್ರೀತಿಯ ಉಪಾಸಕನಿಗೆ ಓಂಕಾರವು ಕೊಟ್ಟ ಅನುಭೂತಿಯ ಕಾಣ್ಕೆಯನ್ನು ನಾನಿಲ್ಲಿ ಚಿತ್ರಿಸಲು ಯತ್ನಿಸಿದ್ದೇನೆ. ೧೯೨೪ಕ್ಕೆ ಸಲ್ಲುವ ಅಕ್ಷಯ ತೃತೀಯೆಯ ದಿನ ಬರೆದುದು. ಕರ್ನಾಟಕ ಕಾಲೇಜ ಪತ್ರಿಕೆಯಲ್ಲಿ ೧೯೨೯ ರಲ್ಲಿ ಒಮ್ಮೆ ಅಚ್ಚಾಗಿತ್ತು. ]

೧

ಓಂ ನಮಃ ಶ್ರೀ ಪ್ರಣವ ! ನಿನಗೆ ಪೃಥ್ವೀಪಿತಗೆ
ನಿನ್ನಂತರಂಗದೊಳು ವಿಶ್ವಾಂತರಂಗಗಳು
ಕಣ್ಣಿಗೊಪ್ಪುವ ಕೃಷ್ಣರೂಪವೇ ನನ್ನದೀ
ಪ್ರೇಮಪ್ರಣಾಮ ನಿನಗೆ!

೨

ಕೂತು ಕಂಗೊಳಿಸುತಿಹೆ ಜಗದ ಜಗಲಿಯನೇರಿ
ಪ್ರೀತಿಯನ್ನಾತಂಥ ಚೈತನ್ಯ- ದಾತೃವೇ !
ಜ್ಯೋತಿಯೇ ಜೀವಿತಂಗಳ ಜಗಜ್ಜೇತೃವೇ !
ಸಾಷ್ಟಾಂಗ ನಮನ ನಿನಗೆ !

೩

ಈ ಜಗದ ಓಜಸ್ಸೆ ಮಾಜಗದ ತೇಜಸ್ಸೆ !
ರಾಜಿಸಿ ವಿರಾಜಿಸುವ ಭೂವೃಕ್ಷಬೀಜವೇ !
ಸೌಜನ್ಯದಲಿ ಮಣಿವೆ ಮೂರು ಮೂರ್ತಿಗಳೊಂದೆ
ಮೂರ್ತಿಯಾದಂಥ ನಿನಗೆ !

೪

ಯೋಗಿಗಳ ಯೋಗವೇ ! ಭೋಗಿಗಳ ಭೋಗವೇ !
ಯೋಗಭೋಗಂಗಳ ಸುಯೋಗದಿಂ ತ್ರೈಲೋಕ್ಯ
ತ್ಯಾಗಯಾಗವನು ಸಾಗಿಸುವಂಥ ರಾಗವೇ
ಬಾಗುವೆನು ನಾನು ನಿನಗೆ !

೫

ವೇದವನ್ನೋ ನಾದಿ ಮೋದವನು ಮಾಡಬ-
ಲ್ಲಾದ ಮಾಧುರ್ಯವೇ ! ನಿನದಿಸದ ನಾದವೇ !
ವೇದವೇದಾಂತವುಸುರಿದ ಪ್ರಾಣ ! ನನ್ನೈದು
ಹರಣಗಳ ಶರಣು ನಿನಗೆ !

# ಒಂದು

[ ಜಗದ ವಿವಿಧತೆಯಲ್ಲಿ ಏಕತೆಯನ್ನು ಕಾಣಬೇಕೆಂಬ ಸಾಮರಸ್ಯದ ಸನಾತನ ಸತ್ಯದ ವಿಷಯದಲ್ಲಿ ಗೀತಿಗಳಲ್ಲಿ ನನಗನಿಸಿದ್ದ ಭಾವನೆಗಳು ಇಲ್ಲಿ ಒಡಮೂಡಿವೆ. ]

೧

ಹೊತ್ತು ಮುಳುಗಲು ನಿತ್ಯ ನಿತ್ಯದಿ
ಕತ್ತಲಾಯ್ತಿನ್ನೇನು ಗತಿಯೆಂ-
ದತ್ತು ಸತ್ತರೆ ಸತ್ತು ಸುಣ್ಣಾಗುವದೆ ಮತ್ತೇನು ?

ಕತ್ತಲೆಯ ಹೊಟ್ಟೆಯೊಳು ಹುಟ್ಟುವ
ಮುತ್ತಿನಂತಹ ಹಗಲಿನೊಳಗಿನ
ಸತ್ಯತೆಯ ಗಂಧವನು ತಿಳಿಯದೆ ಅತ್ತರೇನಹುದು ?

೨

ಒಂದು ಒಂದೇ ವಸ್ತುವದು; ಆ
ಒಂದೆ ವಸ್ತುವಿನಿಂದ ಅಂದವು !
ಒಂದೆ ಒಂದದು ! ಒಂದುಗೂಡುತ ಒಂದೆಯಾಗಿಹುದು !

ಒಂದು ತೋರುವ ತೆರದಿ ತೋರುತ
ಒಂದೆ ಇದ್ದರು ಒಂದೆ ಇರದಲೆ
ಒಂದೆ ಒಡನೆಯು ಬಗೆಗಳಿಂದಲಿ ಬೇರೆ ತೋರುವುದು !

---

# ಗೀತಾಪತಿಗೆ

[೧೯೩೦ ಕ್ಕೆ ಸಲ್ಲುವ ಪ್ರಮೋದ ಸಂವತ್ಸರದ ಆಷಾಢದಲ್ಲಿ ಬಂದ ಅನುಭವದ ಒಂದು ಚಿತ್ರ. 'ಕರುಣಾಳು ಬಾ ಬೆಳಕೆ' ಎಂದು ಆರ್ತಸ್ವರದಿಂದ ಕೂಗಿದ ಆಂಗ್ಲ ಕವಿಗೆ ಅನಿಸಿದಂತೆ ಬಾಳುವೆಯಲ್ಲಿ ಒಮ್ಮೆ ಆಸ್ತಿಕನಾದವನು ನಾಸ್ತಿಕನಾದ ಅವಧಿಯಲ್ಲಿ ಬಂದ ಅನುಭೂತಿಯ ಉದ್ಗಾರಗಳು ಇಲ್ಲಿವೆ. ಪುನಃ ಆಸ್ತಿಕತೆ ಉದಯವಾದ ಅವಧಿಯಲ್ಲಿ ಉಂಟಾದ ಅನುಭೂತಿ ಮುಂದಿನ ಪದ್ಯದಲ್ಲಿದೆ. ಈ ಪದ್ಯ ಬರೆದ ಕಾಲಕ್ಕೆ ಮೊದಲು 'ಜಯ ಕರ್ನಾಟಕ'ದಲ್ಲಿ ಅಚ್ಚಾಯ್ತು. ]

'ಪತ್ರಂ ಪುಷ್ಪಂ
ಫಲಂ (ಚ) ತೋಯಂ'
ಇತ್ತರೆ ಬರುವೆನು
ಹತ್ತಿರವೇ ಎಂ-
ದತ್ತೂ ಕರೆದೂ
ಭಿಡೆಗಿಡೆಯಿಲ್ಲದೆ
ನಯಭಯವಿಲ್ಲದೆ
ಭಿಕ್ಷೆಯ ಬೇಡುವ
ಭಿಕಾರಿ ಭೋ ಪ್ರಭು
ಜಯತು ಜಗದ್ಗುರು !

ಭಗವದ್ಗೀತಾ-
ಕರ್ತೃವೆ ! ನೇತೃವೆ !
ಎಲ್ಲಿಯು ಇಲ್ಲದ
ಎಲೆ ಎಲೆ ದೇವಾ
ಎಲೆಯೂ ಇಲ್ಲದೆ
ತೊಳಲುತ ಬಳಲುತ
ಅಲೆಯುವ ಈ ಗಾ-
ವಿಲನಾಗಿಹ ದೇ-
ವಿಲಿಯಾದೆನ್ನಯ
ಬಳಿಯಲಿ ನೀನೇ

ಬಳಿಸಾರುವದಿಲ್ಲೇನಯ್ಯಾ
ಕುಲುಕುಲು ನಗುತಲಿ ಕನ್ನಯ್ಯಾ ?

---

# ಸ್ಪಂದನ

[ ೧೯೩೦ ರಲ್ಲಿ ಆವರಿಸಿದ ನಾಸ್ತಿಕತೆ ೧೯೩೨ರಲ್ಲಿ ಪುನಃ ಆಸ್ತಿಕತೆಯಲ್ಲಿ ಪರಿಣಮಿಸಿದಾಗ ಉಂಟಾದ ಅನುಭೂತಿಯನ್ನು ಇಲ್ಲಿ ಕಾಣಬಹುದು. ದಿ. ೧೫-೨-೩೨ ಕ್ಕೆ ಲಕ್ಷ್ಮೇಶ್ವರದಲ್ಲಿ ಗೆಳೆಯ ರಾಮುವಿನೊಡನೆ ಇದ್ದಾಗ ಬರೆದ ಪದ್ಯವಿದು. ಮಂಗಳೂರಿನ ಗೆಳೆಯರು ಹೊರಡಿಸಿದ " ಕಾವ್ಯಸಾಮ್ರಾಜ್ಯ " ದಲ್ಲಿ ೧೯೩೩ ರಲ್ಲಿ ಮೊದಲು ಅಚ್ಚಾಯ್ತು. ]

೧

ತಿಳಿಯದಂತೆಯೆ
ಗೆಳೆಯ ಗೆಳೆಯನ
ಬಳಿಗೆ ಬರುವಂತೆ
ಒಳಗೆ ಇರುವಂತೆ
ಜೀವವಿಂದಿಗೆ
ದೇವನಲ್ಲಿಗೆ
ಧಾವಿಸುತಲಿಹುದು
ಭಾವಿಸುತಲಿಹುದು !

೨

ತೆರಳಿ ಪ್ರಾಣವು
ಮರಳಿ ಬಂದಿತು
ಹೊಸತು ಬಾಳುವೆಯು
ಹಸಿತ ಏಳುವೆಯು !
ಅಲ್ಲಗಳೆಯುವ-
ದೆಲ್ಲಿಗುಳಿಯಿತೊ
ಸುಹೃದನಿಹುದಹುದು
ಅಹುದು ಇಹುದಹುದು !

೩

ಇಹನು ಇಹನೋ
ಸುಹೃದನಿಹನೋ
ನಲಿವು ಬಾಳುತಿದೆ
ಉಲಿವು ಕೇಳುತಿದೆ
ಗಾಳಿಯಲೆಯಲಿ
ತೇಲಿ ಬರುತಿದೆ
ಕೇಳಿ ನೀಗುವುದೇ ?
ತಾಳಲಾಗುವುದೇ ?

೪

ಎದೆಯು ವಿರಹದಿ
ಕುದಿಯುತಿದೆ ನೀ
ಬಾರದಿರೆ ಬೇಗ
ತೋರದಿರೆ ಈಗ
ಕುರುಹ ಕೊಟ್ಟವ
ವಿರಹವಿತ್ತವ
ಬರದೆ ಹೋಗುವರೇ ?
ಇರದೆ ಸಾಗುವರೇ ?

## ಸ್ಪಂದನ

೫

ಬಂದು ಬಿಡು ಬಾ
ಬಂದೆ ಬಿಡು ಬಾ

ದರ್ಶನವೆ ಬೇಕು
ಸ್ಪರ್ಶನವೆ ಬೇಕು !

ಬಂದುದಾದರೆ
ಇಂದಿಗಾಗುವ

ಹರುಷವೇ ಹರುಷಾ !
ಅರಿಕೆಯಿದು ಪುರುಷಾ !

---

# ಅಂತರಂಗವನು ಅರಳಿಸು !

[ ಈ ಪದ್ಯದಿಂದ ಆರಂಭಿಸಿ ಇನ್ನು ಮುಂದೆ ಬರುವ ೯ ಪದಗಳು ನನ್ನ ಹೃದಯವನ್ನು ಅತಿಯಾಗಿ ಸೆಳೆದ ಶ್ರೀ ರವೀಂದ್ರ ಗುರುದೇವನ ಬಂಗಾಲಿ **ಗೀತಗಳ** ಕನ್ನಡ ರೂಪಗಳು. ಈ ಮೊದಲ ಪದ್ಯವು ''ಅಂತರ ಮಮ ಬಿಕಸಿತ ಕರ'' ಎಂಬ ಗೀತದ ಅನುವಾದ. ಮಹಾತ್ಮರು ತಮ್ಮ ಆಶ್ರಮಭಜನಾವಲಿಯಲ್ಲಿ ಇದನ್ನು ಆಯ್ದುಕೊಂಡಿದ್ದಾರೆ. ಇದು ವಂಗ ಗೀತಾಂಜಲಿಯಲ್ಲಿ ೫ನೆಯ ಗೀತವಾಗಿದೆ. ]

ಅಂತರಂಗವನು ಅರಳಿಸು ಹರಿಯೇ,
ಅಂತಃಕರಣದ ಒಳ-ದೊರೆಯೇ !
ನಿರ್ಮಲಗೊಳಿಸೈ, ಉಜ್ಜ್ವಲಗೊಳಿಸೈ !
ಸುಂದರಗೊಳಿಸೈ ಶ್ರೀ ಹರಿಯೇ !

ಎಚ್ಚರವೀಯೈ, ಕೆಲಸವನೀಯೈ !
ಅಂಜಿಕೆಯೆಂಬುದ ಕತ್ತರಿಸೈ !
ಅಲಸಿಕೆ ಕಳೆಯೈ ಸಂಶಯ ಕಳೆಯೈ
ಅಂಗದಿ ಮಂಗಲ ಬಿತ್ತರಿಸೈ !

ಸಕಲರೊಡನೆ ನನ್ನನು ಜೊತೆಗೊಳಿಸೈ !
'ಜೊತೆಯೇ ಮುಕುತಿಯು' ಇದ ಕಲಿಸೈ !
ಸಕಲ ಕರ್ಮದಲಿ ನೀ ಸಂಚರಿಸೈ !
ಶಾಂತ ಸಮರಸದಿ ನೀ ನಿಲಿಸೈ !

ಚರಣ ಪದ್ಮನನು ಚಿತ್ತದೊಳಿರಿಸೈ
ಆತ್ಮದಿ ಆನಂದವ ಸುರಿಸೈ !
ಆಹಾ ಓಹೋ ಆ ಆನಂದದ
ಮಹಾಪ್ರವಾಹವ ನೀ ಹರಿಸೈ !

---

# ನವನವ ರೂಪದಿ ಬಾರ್ರೈ

[ ವಂಗ ಗೀತಾಂಜಲಿಯ ೭ನೆಯ ಪದ್ಯವಾದ "ತುಮಿ ನಬ ನಬ ರೂಪೆ ಎಶೊ ಪ್ರಾನೇ" ಎಂಬ ಹಾಡಿನ ಕನ್ನಡ ರೂಪವಿದು. ಈ ಎಲ್ಲ ಪದ್ಯಗಳಲ್ಲಿ ಗುರುದೇವನ ಸಮಸಂಸ್ಕೃತ ಪದಪ್ರಯೋಗಗಳನ್ನು ಆದಷ್ಟು ನಾನು ಉಳಿಸಿದ್ದೇನೆ. ವಂಗ ಛಂದದ ಕಲಮುಗೊಂಡ ಕನ್ನಡ ಛಂದೋಗೀತಗಳನ್ನು ಇಲ್ಲಿ ಕಾಣಬಹುದು.]

ನವ ನವ ರೂಪದಿ ಬಾರ್ರೈ ಪ್ರಾಣದಲಿ !
ವಿಧ ವಿಧ ವರ್ಣದಿ ಗಂಧದಿ ಗಾನದಲಿ ! || ಪಲ್ಲ ||

ಬಾರ್ರೈ ಅಂಗದಿ ಪುಲಕದಿ ಸ್ಪರ್ಶಿಸುತ
ಬಾರ್ರೈ ಚಿತ್ತದಿ ಅಮೃತವ ವರ್ಷಿಸುತ
ಬಾರ್ರೈ ನಯನದಿ ಮುಗ್ಧ ಮುದದಲಿ
ತೋರ್ರೈ ತೆರೆತೆರೆ ಹೃದಯ-ಹ್ರದದಲಿ !

ಬಾರ್ರೈ ಸುಂದರ ಸ್ನಿಗ್ಧ ಪ್ರಶಾಂತಾ
ಬಾರ್ರೈ ನಿರ್ಮಲ ಉಜ್ಜ್ವಲ ಕಾಂತಾ
ಬಾರ್ರೈ ಸುಖದಲಿ ದುಃಖದಿ ಮರ್ಮದಲಿ
ತೋರ್ರೈ ನಿತ್ಯದ ಜೀವನಕರ್ಮದಲಿ !

ಚಿತ್ರಚಿತ್ರವಹ ವಿವಿಧ ವಿಧಾನದಲಿ
ಕೃತ್ಯಕೃತ್ಯಗಳ ಆ ಅವಸಾನದಲಿ
ನವ ನವ ರೂಪದಿ ಬಾರ್ರೈ ಪ್ರಾಣದಲಿ
ವಿಧ ವಿಧ ವರ್ಣದಿ ಗಂಧದಿ ಗಾನದಲಿ !

— —

# ಹಾಡ್ಯೈ ಆತನ ಹೆಸರು

[ ಶಾಂತಿಸಿಕೇತನ ಆಶ್ರಮದಲ್ಲಿ “ ಕರೊ ತಾರ ನಾಮ ಗಾನ ಜತೊ ದಿನ ರಹೆ ಎಇ ಪ್ರಾನ ” ಎಂಬ ಭಕ್ತಿಗೀತವನ್ನು ಸುಖದುಃಖಗಳ ಗಂಭೀರ ಪ್ರಸಂಗದಲ್ಲಿ ಮೇಳಗೀತವಾಗಿ ಹಾಡುವದುಂಟು. ಆ ವಂಗಗೀತದ ಕನ್ನಡ ರೂಪವಿದು. ]

ಎನಿತೋ ದಿನ ಇರುತ್ತಿರುವುದೊ ಈ ಉಸಿರು
ಅನಿತೂ ದಿನ ಹಾಡ್ಯೈ ಆತನ ಹೆಸರು || ಪಲ್ಲ ||

೧

ಯಾವನ ಮಹಿಮೆಯ ಜ್ವಲಂತ ಜ್ಯೋತಿಯು
ಜಗದಲಿ ಬೆಳಕನು ಹಾಸುವುದೋ
ಜೀವಸಂಕುಲದ ಸುಖಕರ ಶ್ರೋತದಿ
ಪ್ರೇಮಾಮೃತವದು ಸೂಸುವುದೋ !

೨

ಮೇಲಕು ಕೆಳಗೂ ದಿಗ್ದಿಗಂತಕೂ
ಮುನ್ನೀರ್-ಮುಗಿಲಲಿ ಪದೇ ಪದೇ
ಓಲೈಸುವನಿಗೆ ಕೊನೆಯೆಲ್ಲಿದೆ ಕೊನೆ ?
ಇದನೇ ತಿಳಿಯುವ ಸದಾ ಸದಾ !

೩

ಚೈತನ್ಯದ ಮನೆ ಸಂಸ್ಪರ್ಶದ ಮಣಿ
ನಯನಕೆ ಆತನೆ ಅನಿಮೇಷ
ಆತನ ದಯೆಯಲಿ ಏಕನಿಮಿಷದಲಿ
ಇಲ್ಲವೊ ದುಃಖವು ಲವಲೇಶ !

---

# ಎಲ ಎಲಾ ನಿಷ್ಠುರಾ

[ ವಂಗ “ ಗೀತಾಂಜಲಿ ” ಯೊಳಗಿನ ೯೦ನೆಯ ಗೀತವಾದ “ ಏಇ ಕರೆಛೊ ಭಾಲೊ ನಿಠುರಾ ” ಎಂಬ ಗೀತದ ಕನ್ನಡ ರೂಪವಿದು. ಜೀವನದಲ್ಲಿ ಮರ್ಮಕ್ಕೆ ಉಂಟಾಗುವ ಆಘಾತವೂ ಪರಮಾತ್ಮನ ಆಶೀರ್ವಾದವೆಂದೇ ಇಲ್ಲಿ ಹೇಳಲಾಗಿದೆ. ]

೧

ಅಂತು ಒಳಿತನು ನನ್ನ ಬಾಳ್ವಿಯಲಿ ಪಳಗಿಸಿದೆ
ಎಲ ಎಲಾ ನಿಷ್ಠುರಾ !
ಇಂತು ಹೃದಯುವ ತೀವ್ರಜ್ವಾಲೆಯಲಿ ಬೆಳಗಿಸಿದೆ
ಎಲ ಎಲಾ ನಿಷ್ಠುರಾ !

೨

ಸೋಂಕದಿರೆ ಕಿಡಿ, ಧೂಪದ ಗಂಧ ಬಂದೀತೆ
ಎಲ ಎಲಾ ನಿಷ್ಠುರಾ !
ಕೊಂಕುತಿರೆ ದೀಪವದು, ಬೆಳಕು ಬಲು ಸಂದೀತೆ
ಎಲ ಎಲಾ ನಿಷ್ಠುರಾ !

೩

ಮಮಚಿತ್ತ ಕಳೆಗೆಟ್ಟು ಚೇತರಿಸದಿರುವಾಗ
ಎಲ ಎಲಾ ನಿಷ್ಠುರಾ !
ಅಮಮ ಆಘಾತವಿದೆ ತವ ಸ್ಪರ್ಶ — ವರವಾಗಿ
ಎಲ ಎಲಾ ನಿಷ್ಠುರಾ !

೪

ಮೋಹಾಂಧಕಾರದಲಿ ಕಣ್ಗೆ ನೀನಿಲ್ಲಾಯ್ತು
ಎಲ ಎಲಾ ನಿಷ್ಠುರಾ !
ಆಹ ವಜ್ರಾಗ್ನಿಯಲಿ ಬಾಳುವೆಗೆ ಬೆಳಕಾಯ್ತು
ಎಲ ಎಲಾ ನಿಷ್ಠುರಾ !

# ಇಕೊ ಇಕೋ ಕೊಯ್ದುಕೋ !

[ ವಂಗ "ಗೀತಾಂಜಲಿ"ಯಲ್ಲಿ ೮೭ನೆಯ ಗೀತವಾದ "ಛಿನ್ನ ಕರೊ ಲಾಓ ಹೆ ಮೋರ ಆರ್ ಬಿಲಂಬ ನಯ್" ಎಂಬುದರ ಕನ್ನಡ ರೂಪವು. ಇಂಗ್ಲಿಷ್ ಗೀತಾಂಜಲಿಯಲ್ಲಿ "Pluck this little flower" ಎಂಬುದಾಗಿ ೬ನೆಯ ಪದ್ಯವಾಗಿದೆ. ]

ತಡವೇಕೆ ತಡವೇಕೆ ?
ಈ ಹೂವ ಕೊಯ್ದುಕೊಳ್ಳೈ !
ಹುಡಿಗೂಡಿ ಹೋದೀತು
ಎಂಬ ಈ ಭಯವ ತಳ್ಳೈ !

ನಿನ್ನ ಮಾಲೆಯಲಿ ಈ
ಹೂವಿಗೊಂದಿನಿತು ಸ್ಥಲವು
ಇನ್ನು ದೊರೆಯಲಿ ಬಿಡಲಿ—
ದೇವ ನನಗಿಲ್ಲ ಛಲವು !

ನಿನ್ನ ಕೈ ಕುಲುಕಿನಲಿ
ಕೊಯ್ದ ಆ ಭಾಗ್ಯ ಬರಲಿ !
ನಿನ್ನಡಿಯಲಿದ್ದ ಸುಖ
ಕೆಲಕಾಲ ಭೋಗ್ಯವಿರಲಿ !

ಹಗಲು ಒಮ್ಮೆಲೆ ಮುಗಿದು
ಕತ್ತಲೆಯು ಕವಿವ ಮುನ್ನ
ನಿನ್ನ ಪೂಜೆಯ ಸಮಯ
ಅರಿಯದಲೆ ಸರಿವ ಮುನ್ನ

ಈ ಹೂವಿನಲಿ ಬಣ್ಣ
ಕಳಕಳಿಸುತಿರುವಾಗಲೇ
ಗಂಧ ಮಕರಂದಗಳು
ನಳನಳಿಸುತಿರುವಾಗಲೇ

ಈ ಕಾಲ ಶುಭಕಾಲ
ಇನ್ನೂ ಇದೀಗ ಇರಲು
ಸ್ವೀಕರಿಸು ಸೇವೆಯನು
ಈ ಹೂವು ಸೇವೆಗಿರಲು !

ಇಕೊ ಇಕೋ ಕೊಯ್ದುಕೋ
ಇಲ್ಲದ ವಿಲಂಬ ಜೋಡ್ಬೈ !

ಬಿನ್ನಹವ ಮನ್ನಿಸೈ
ಕರದಿ ಚುಂಬನವ ನೀಡೈ !

ತಡವೇಕೆ ತಡವೇಕೆ?
ಈ ಹೂವ ಕೊಯ್ದುಕೊಳ್ಳೈ !

ಹುಡಿಗೂಡಿ ಹೋದೀತು
ಎಂಬ ಈ ಭಯವ ತಳ್ಳೈ !

---

# ಒಂಟಿಗನ ಹಾಡು

[ "ಗೀತಾಂಜಲಿ"ಯ ವಂಗ ಆವೃತ್ತಿಯಲ್ಲಿ "ಆಮಿ ಹೆಥಾಯ್ ಥಾಕಿ ಶುಧು ಗಾಯತೆ ತೊಮಾರ ಗಾನ" ಎಂಬುದಾಗಿದ್ದ ೩೧ನೆಯ ಗೀತ ಅಥವಾ ಇಂಗ್ಲಿಷ್ ಆವೃತ್ತಿಯಲ್ಲಿ "I am here to sing Thee Songs" ಎಂಬುದಾಗಿದ್ದ ೧೫ನೆಯ ಪದ್ಯದ ಕನ್ನಡ ರೂಪ. ]

೧

ಇಗೊ ಇಗೋ ಒಂಟಿಗನು ನಿಂತಿಹೆ
ಹಾಡುತಲಿ ತವ ಗಾನವ !
ಜಗದ ಸಭೆಯಲಿ ಮೂಲೆಯಿದರಲಿ
ಇತ್ತೆ ನನಗೀ ಸ್ಥಾನವ !

೨

ನಾಥ ನನಗೀ ನಿನ್ನ ಭುವನದಿ
ಯಾವ ಕಾರ್ಯವು ಹೊಳೆಯದು !
ಏತಕೋ ಈ ಪ್ರಾಣ ಈ ತೆರ
ಸ್ವರವ ತೆರೆವುದೊ ತಿಳಿಯದು !

೩

ನಿಶೆಯ ನೀರವ ದೇಗುಲದಿ ಇದೆ
ಏಗ ತವ ಆರಾಧನೆ—
ಬೆಸನ ನೀಡೆಲೊ ನನಗೆ ಹಾಡಲು
ಆಗ ಎಲೆ ಎಲೆ ರಾಜನೆ !

೪

ಬಾಂಸಲಿ ಬಂಗಾರ-ಸ್ವರದಲಿ
ಬೆಳಗಬೀಣೆ ನವೋನವ !
ದೂರವಿರಿಸದೆ ಕರೆ ಸಮೀಪಕೆ
ನೀಡು ಈ ಸನ್ಮಾನವ !

# ಆಹ ಅಸೀಮನೆ !

[ ವಂಗ ಗೀತಾಂಜಲಿಯೊಳಗಿನ ‘ ಸೀಮಾರ ಮಾಝೆ ಅಸೀಮ ತುಮಿ ’ ಎಂಬ ೧೨೦ ನೆಯ ಗೀತದ ಕನ್ನಡ ರೂಪವು. ಅನಂತವು ಸಾಂತದಲ್ಲಿ ಪ್ರಕಟವಾಗುವುದರಲ್ಲಿಯೇ ವಿಶಿಷ್ಟ ಸಹಜ ಶೋಭೆಯುಂಟೆಂಬ ಭಕ್ತನ ಹೇಳಿಕೆ ಇಲ್ಲಿದೆ. ]

೧

ಆಹ ಅಸೀಮನೆ ಸೀಮೆಯಲಿ ಮಮ, ಬಾರಿಸೈ ತವ ಸುಸ್ವರಾ !
ನನ್ನ ಒಳದಲಿ ನಿನ್ನ ಬೆಳಕದು ಇಂತು ಇನಿತೋ ಸುಮಧುರಾ !
ಎನಿತೊ ವರ್ಣಾ, ಎನಿತೊ ಗಂಧಾ !
ಎನಿತೊ ಗಾನಾ, ಎನಿತೊ ಛಂದಾ !
ಆಹ ಅಸೀಮನೆ ಸೀಮೆಯಲಿ ಮಮ, ಬಾರಿಸೈ ತವ ಸುಸ್ವರಾ !

೨

ಉಲುಹು ಇಲ್ಲದ ಬೇಹುಗಾರಾ
ರೂಪವಿಲ್ಲದ ರೂಪುಗಾರಾ !
ನಿನ್ನ ರೂಪದ ಲೀಲೆಯಲಿ ಎದೆ ತುಂಬಿ ಬಂತೈ ಪ್ರವರಾ !
ನನ್ನ ಒಳದಲಿ ನಿನ್ನ ಶೋಭೆಯು ತುಂಬಿ ಇನಿತೋ ಸುಮಧುರಾ !
ಆಹ ಅಸೀಮನೆ ಸೀಮೆಯಲಿ ಮಮ, ಬಾರಿಸೈ ತವ ಸುಸ್ವರಾ !

೩

ನಿನ್ನ ನನ್ನಯ ಮಿಲನದಿಂದಲಿ ಎಲ್ಲ ಗುಟ್ಟೊ ಒಡೆದಿವೆ !
ವಿಶ್ವಸಾಗರದಲೆಗಳಲಿ ಆಹ ಆಟವೆನಿತೋ ನಡೆದಿವೆ !
ನಿನ್ನ ಬೆಳಕದು ನೆರಳುಗೊಳ್ಳದೆ ನನ್ನನೇ ಮೈಗೊಳ್ಳುತ —
ನನ್ನ ಕಂಬನಿ ಸುರಿದು ಹರಿವುದು ನಿನ್ನನೇ ಕೈಗೊಳ್ಳುತ !
ನನ್ನ ಒಳದಲಿ ನಿನ್ನ ಶೋಭೆಯು ಇನಿತು ಮಧುರವೂ ಸುಂದರಾ !
ಆಹ ಅಸೀಮನೆ ಸೀಮೆಯಲಿ ಮಮ, ಬಾರಿಸೈ ತವ ಸುಸ್ವರಾ !

# ನೀನೆಲ್ಲಿ ?

[ ಈ ಹಾಡು ವಂಗ 'ಗೀತಾಂಜಲಿ'ಯಲ್ಲಿ ೧೦೭ ನೆಯ ಗೀತ ಮತ್ತು ಇಂಗ್ಲಿಷ್ ಆವೃತ್ತಿಯಲ್ಲಿ ೧೦ನೆಯ ಪದ್ಯವಾಗಿದೆ. ಬಂಗಾಳಿಯಲ್ಲಿ "ಜೆಥಾಯ್ ಥಾಕೆ ಸಬಾರ್ ಅಧಮ ದೀನೇರ್ ಹೊತೆ ದೀನ" ಎಂಬುದಾಗಿಯೂ ಇಂಗ್ಲಿಷಿನಲ್ಲಿ "Here is Thy Footstool" ಎಂಬುದಾಗಿಯೂ ಆರಂಭವಾಗುತ್ತದೆ. ]

ಅಧಮರಲಿ ಅಧಮರಾದವರ ಅಡಿಯಲ್ಲಿ
ಕಳೆದು ಕಂಗೆಟ್ಟವರ ಕಟ್ಟ ಕಡೆಯಲ್ಲಿ
ನಿನ್ನಡಿಯು ರಾರಾಜಿಸುವುದು !

ಬಡವರಲಿ ಬಡವರಾದವರ ಬುಡದಲ್ಲಿ
ದೀನರಲಿ ದೀನರಾದವರ ವಡದಲ್ಲಿ
ನಿನ್ನಡಿಯು ರಾರಾಜಿಸುವುದು !

ಹಿಂದೆ ಹಿಂದೇ ಉಳಿದವರ ಹಿಂದೆ ಹಿಂದೇ
ಕೆಳಗುಳಿದ ಜನರೊಳಗೆ ಕೆಳಕೆಳಗೆ ಇಂದೇ
ನಿನ್ನಡಿಯು ರಾರಾಜಿಸುವುದು !

ನನ್ನ ಬೊಜ್ಜಿನ ಬಿಂಕ ಬಾಗಲಿಕ್ಕಿಲ್ಲ
ನಿನ್ನಡಿಯ ಅಂಕಿತವ ತಾಗಲಿಕ್ಕಿಲ್ಲ !
ನಿನ್ನಡಿಯು ನನಗೆ ಬಲು ದೂರ !

ನಡುವೆಯೇ ಉಳಿದೀತು ನನ್ನ ಈ ನಮನ
ಕಡುನೊಂದ ಬಡ ರಂಕ ರೈತ ಜನ ರಮಣ !
ನಿನ್ನಡಿಯು ನನಗೆ ಬಲು ದೂರ !

ಅಪಮಾನಿತರ ಜಡಿಗೆ ನಿಂನುಡಿಯು ಒಲಿಯೆ
ಜಪ ತಪ ನಮಸ್ಕಾರ ನಂನೆಡೆಯೊಳುಳಿಯೆ—
ನಿನ್ನಡಿಯು ನನಗೆ ಬಲುದೂರ !

ಸಂಗಹೀನರ ಸಂಗವೇ ನಿನಗೆ ಮೆಚ್ಚು
ಒಡವೆಹೀನರ ಗೊಡವೆಯೇ ನಿನಗೆ ಹೆಚ್ಚು !
ನನ್ನೆದೆಯು ನಿನಗೆ ಬಲು ದೂರ !

ಅಧಮರಲಿ ಅಧಮರಾದವರ ಅಡಿಯಲ್ಲಿ
ಕಳೆದು ಕಂಗೆಟ್ಟವರ ಕಟ್ಟ ಕಡೆಯಲ್ಲಿ
ನಿನ್ನಡಿಯು ರಾರಾಜಿಸುವುದು !

# ಒಂದೆ ನಮಸ್ಕಾರ !

[ ಈ ಹಾಡು ವಂಗ “ ಗೀತಾಂಜಲಿ ” ಯಲ್ಲಿ ‘ ಎಕ್‌ಟಿ ನಮಸ್ಕಾರೇ ಪ್ರಭೂ ಎಂಬುದಾಗಿ ೧೪೭ನೆಯ ಗೀತವೂ ಇಂಗ್ಲಿಷಿನಲ್ಲಿ ‘ In one Salutation to Thee’ ಎಂಬುದಾಗಿ ೧೦೩ನೆಯ ಪದ್ಯವೂ ಆಗಿವೆ. ವಂಗಗೀತದ ಧಾಟಿಯನ್ನೇ ಇಲ್ಲಿ ಅನುಸರಿಸಲಾಗಿದೆ. ]

೧

ಒಂದೆ ನಮಸ್ಕಾರ ಪ್ರಭೋ
ಒಂದೆ ನಮಸ್ಕಾರವು
ಒಂದೆ ನಮಸ್ಕಾರದಲ್ಲಿ
ಇಂದು ನಿನ್ನ ಚರಣದಲ್ಲಿ
ದೇಹವೆಲ್ಲ ಚಾಚಲಿ
ವಿಶ್ವವೆಲ್ಲ ತೋಚಲಿ—
ಒಂದೆ ನಮಸ್ಕಾರದಿ
ಸಕಲ ಸಂಸಾರದಿ !
ಒಂದೆ ನಮಸ್ಕಾರ ಪ್ರಭೋ
ಒಂದೆ ನಮಸ್ಕಾರವೋ
ಒಂದೆ ನಮಸ್ಕಾರವು !

೨

ವಿವಿಧ ಸ್ವರದನೇಕ ಗಾನ
ಸವಿಯ ಹೊಂದಿ ಏಕ-ತಾನ !
ಒಂದೆ ನಮಸ್ಕಾರದಲ್ಲಿ
ಇಂದು ನಿನ್ನ ಚರಣದಲ್ಲಿ
ಗಾನ ಧಾರೆ ನಿಲ್ಲಲಿ !
ಮೌನವಾರಿ ಚೆಲ್ಲಲಿ—
ಒಂದೆ ನಮಸ್ಕಾರದಿ
ಇಹುದು ಶಾಂತಿವಾರಿಧಿ!
ಒಂದೆ ನಮಸ್ಕಾರ ಪ್ರಭೋ
ಒಂದೆ ನಮಸ್ಕಾರವೋ
ಒಂದೆ ನಮಸ್ಕಾರವು !

೩

ಭಾವ-ರಸದಿ ಬಾಗಿ ನಿಂತ
ಶ್ರಾವಣದ ಸುಮೇಘದಂತೆ
ಒಂದೆ ನಮಸ್ಕಾರದಲ್ಲಿ
ಇಂದು ನಿನ್ನ ಚರಣದಲ್ಲಿ
ಮನವೆಲ್ಲಾ ಬಾಗಲಿ !
ತನುವೆಲ್ಲಾ ತೂಗಲಿ—
ಒಂದೆ ನಮಸ್ಕಾರದಿ
ನಿನ್ನ ಭವನ ದ್ವಾರದಿ !
ಒಂದೆ ನಮಸ್ಕಾರ ಪ್ರಭೋ
ಒಂದೆ ನಮಸ್ಕಾರವೋ
ಒಂದೆ ನಮಸ್ಕಾರವು !

೪

ಏನು ಎರಗು ಅಹೋರಾತ್ರಿ !
ಮಾನಸದ ಸರೋಯಾತ್ರೆ !
ಒಂದೆ ನಮಸ್ಕಾರದಲ್ಲಿ
ಇಂದು ನಿನ್ನ ಚರಣದಲ್ಲಿ
ಪ್ರಾಣಹಂಸವೆರಗಲಿ !
ಬೆರೆಯುತಂಶ ಕರಗಲಿ—
ಒಂದೆ ನಮಸ್ಕಾರದಿ
ಮಹಾ ಮರಣ-ವಾರಿಧಿ !
ಒಂದೆ ನಮಸ್ಕಾರ ಪ್ರಭೋ
ಒಂದೆ ನಮಸ್ಕಾರವೋ
ಒಂದೆ ನಮಸ್ಕಾರವು !